ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಕ್ರಾಂತಿ ಹಬ್ಬದ ಶುಭಾಶಯಗಳು

ಸಂಪುಟ : ೫೭ ಜನವರಿ ೨೦೨೦ ಸಂಚಿಕೆ : ೦೧



ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿ ಅವರಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬೆಳ್ಳಿಪುತ್ಥಳಿಯನ್ನು ನೀಡಿ ಶಾಲು ಹೊದಿಸಿ, ಗಂಧದ ಹಾರಹಾಕಿ ಸನ್ಮಾನಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು, ಸಚಿವರಾದ ಶ್ರೀ ವಿ. ಸೋಮಣ್ಣನವರು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸ್ಮಾರಕ ವಸ್ತು ಸಂಗ್ರಹಾಲಯಕ್ಕೆ ಪ್ರಧಾನಮಂತ್ರಿಗಳು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಶಂಖುಸ್ಥಾಪನೆ ನೆರವೇರಿಸಿದರು.



ಪೇಜಾವರ ಮಠದ ಪೂಜ್ಯ
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು
(೧೯೩೧-೨೦೧೯)

## ಜನವರಿ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | 31 | |

## ಫೆಬ್ರವರಿ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## ಮಾರ್ಚ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | | | | |

## ಏಪ್ರಿಲ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | | |

## ಮೇ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 31 | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

# ದಿನದರ್ಶಿ 2020



## 2020ನೇ ವರ್ಷದ ಸರ್ಕಾರಿ ರಜಾ ದಿನಗಳು

| | | | |
|---|---|---|---|
| ಜನವರಿ | 15 | ಬು | ಮಕರ ಸಂಕ್ರಾಂತಿ |
| | 26 | ಭಾನು | ಗಣರಾಜ್ಯೋತ್ಸವ |
| ಫೆಬ್ರವರಿ | 21 | ಶುಕ್ರ | ಮಹಾಶಿವರಾತ್ರಿ |
| ಮಾರ್ಚ್ | 25 | ಬುಧ | ಚಾಂದ್ರಮಾನ ಯುಗಾದಿ |
| ಏಪ್ರಿಲ್ | 6 | ಸೋ | ಮಹಾವೀರ ಜಯಂತಿ |
| | 10 | ಶುಕ್ರ | ಗುಡ್ ಫ್ರೈಡೇ |
| | 14 | ಮಂ | ಅಂಬೇಡ್ಕರ್ ಜಯಂತಿ |
| | 26 | ಭಾನು | ಬಸವೇಶ್ವರ ಜಯಂತಿ |
| ಮೇ | 1 | ಶುಕ್ರ | ಕಾರ್ಮಿಕರ ದಿನಾಚರಣೆ |
| | 25 | ಸೋ | ರಂಜಾನ್ |
| ಆಗಸ್ಟ್ | 1 | ಶನಿ | ಬಕ್ರೀದ್ |
| | 15 | ಶನಿ | ಸ್ವಾತಂತ್ರ್ಯ ದಿನಾಚರಣೆ |
| | 22 | ಶನಿ | ಗಣೇಶ ಚತುರ್ಥಿ |
| | 30 | ಭಾನು | ಮೊಹರಂ ಕಡೇದಿನ |
| ಸೆಪ್ಟೆಂಬರ್ | 17 | ಗುರು | ಮಹಾಲಯ ಅಮಾವಾಸ್ಯೆ |
| ಅಕ್ಟೋಬರ್ | 2 | ಶುಕ್ರ | ಗಾಂಧಿ ಜಯಂತಿ |
| | 25 | ಭಾನು | ಆಯುಧಪೂಜೆ |
| | 26 | ಸೋ | ವಿಜಯದಶಮಿ |
| | 30 | ಶುಕ್ರ | ಈದ್-ಮಿಲಾದ್ |
| | 31 | ಶನಿ | ವಾಲ್ಮೀಕಿ ಜಯಂತಿ |
| ನವೆಂಬರ್ | 1 | ಭಾನು | ಕನ್ನಡ ರಾಜ್ಯೋತ್ಸವ |
| | 14 | ಶನಿ | ನರಕ ಚತುರ್ಥಿ |
| | 16 | ಸೋ | ದೀಪಾವಳಿ |
| ಡಿಸೆಂಬರ್ | 3 | ಗುರು | ಕನಕದಾಸ ಜಯಂತಿ |
| | 25 | ಶುಕ್ರ | ಕ್ರಿಸ್‌ಮಸ್ |

## ಜೂನ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | | | | |

## ಜುಲೈ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | 31 | |

## ಆಗಸ್ಟ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 30 | 31 | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## ಸೆಪ್ಟೆಂಬರ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | | | |

## ಅಕ್ಟೋಬರ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | 31 |

## ನವೆಂಬರ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | | | | | |

## ಡಿಸೆಂಬರ್ 2020

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | | |







ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಎಸ್. ಉಮಾಮಹೇಶ್, ಕೆ.ಬಿ. ಶಿವಶಂಕರಯ್ಯ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಗೀತಾಂಜಲಿ ಗ್ರಾಫಿಕ್ಸ್
ಬಿ-೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು-೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

email: siddaganganews@gmail.com


## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೬ ಜನವರಿ ೨೦೨೦ ಸಂಚಿಕೆ : ೦೧

## ಒಳಪುಟಗಳಲ್ಲಿ ..................




ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00



# ಪ್ರಧಾನ ಸಂಪಾದಕರ ನುಡಿ........

ಶ್ರೀಮಠ ಸಿದ್ಧಗಂಗಾ ೫೫ ಸಂಪುಟಗಳನ್ನು ದಾಟಿ ೫೬ನೆಯ ಸಂಪುಟದತ್ತ ಮುನ್ನಡೆಸಿದೆ. ಪರಮಪೂಜ್ಯ ಕರ್ನಾಟಕರತ್ನ, ಪದ್ಮಭೂಷಣ, ನಡೆದಾಡುವದೇವರು ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನ ಮತ್ತು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಆಶೀರ್ವಾದದಿಂದ ತನ್ನ ಸೇವಾಪಥಗಾಮಿಯಾಗಿದೆ.

ದಿನಾಂಕ ೨೯-೧೨-೨೦೧೯ರ ಭಾನುವಾರದಿಂದ ಶ್ರೀಮಠದ ಶಿವಲಿಂಗಪುಷ್ಪವಾಗಿದ್ದ ಪಂಡಿತ ಚೆನ್ನಪ್ಪ ಎರೇಸೀಮೆಯವರ ಜನ್ಮಶತಮಾನೋತ್ಸವ ಆಯೋಜಿತವಾಗಿತ್ತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸಾನ್ನಿಧ್ಯ ನೀಡಿದ್ದರು. ಸಮಾರಂಭವನ್ನು ಉದ್ಘಾಟಿಸಿದ ಪ್ರೊ. ಜಿ.ಎಸ್. ಸಿದ್ದಲಿಂಗಯ್ಯನವರು - ಎರೇಸೀಮೆಯವರನ್ನು ಕುರಿತು ಮಾತನಾಡುತ್ತ 'ಬಡವನ ಸಿರಿತನ ಕಡೆತನಕ ಉಳಿದಾನೇನ' ಎನ್ನುತ್ತ ಬಡತನದಲ್ಲಿ ಬೆಳೆದು ಬಂದ ಶ್ರೀ ಎರೇಸೀಮೆಯವರು ನಡೆದಾಡುವ ದೇವರಲ್ಲಿ ಪ್ರೀತಿಯನ್ನಿಟ್ಟುಕೊಂಡವರು ೬೦ ವರ್ಷಗಳ ಬಾಂಧವ್ಯ. ಶ್ರೀಮಠದ ಸೇವಾಸಂಪಿಗೆಯಾಗಿದ್ದರು ಎಂದರು. ಶ್ರೀ ಹೀ.ಚಿ. ಶಾಂತವೀರಯ್ಯನವರು ಎರೇಸೀಮೆ, ಮಲೆಸೀಮೆ, ಬಯಲುಸೀಮೆಗಳಲ್ಲಿ ಎರೇಸೀಮೆ ಫಲವತ್ತಾದುದು ಎಂಬಂತೆ ಇದ್ದವರು ಪಂಡಿತ ಚೆನ್ನಪ್ಪ ಎರೇಸೀಮೆ ಎಂದರು. ಡಾ. ಗೊ.ರು. ಚನ್ನಬಸಪ್ಪನವರು ಮಾತನಾಡುತ್ತಾ ಎರೇಸೀಮೆಯವರ ಆತ್ಮಕಥೆಯಲ್ಲಿ ಅಹಂಕಾರ ಮಮಕಾರ ಮುಕ್ತತೆಯಿದೆ. ಮಗು ಮುಗ್ಧತೆಯ ಆಶಾವಾದಿ ಹಾಸ್ಯದ ಕಾರಂಜಿ ಹಳ್ಳಿಯ ಮಾಸ್ತರ, ಬೀಡಿ ಎಲೇ ಅಡಿಕೆಯ ಚೆಂದ, ನಾಟಕದ ಗೀಳು, ಜೋಕಾಲಿ, ಭೇದಿ ಔಷಧಿ ಕೊಟ್ಟದ್ದನ್ನು ಪ್ರಸ್ತಾಪಿಸಿದರು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಯವರ ಶಿವಚರಣಪುಷ್ಪ ಪ್ರವಚನ ಪಟು ಶ್ರೀ ಎರೇಸೀಮೆ ಎಂದರು.

ಡಾ॥ ಎಂ.ಎನ್. ಚೆನ್ನಬಸಪ್ಪನವರು, ನಾನು ಮತ್ತು ಎರೇಸೀಮೆಯವರು ೧೯೪೮ರಲ್ಲಿ ಶ್ರೀಮಠಕ್ಕೆ ಬಂದವರು. ಶ್ರೀಗಳವರ ಆಶೀರ್ವಾದದಿಂದ ಬೆಳೆದು ಬಂದವರು ಎಂದರು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಯವರು ಶ್ರೀಮಠಕ್ಕೆ ಎರೇಸೀಮೆಯವರಿಗೂ ಅವಿನಾಭಾವದ ನೆಂಟು. ಪ್ರತಿಭಾ ಪಾಂಡಿತ್ಯ, ಬೆಳಕು ಚೆಲ್ಲುವಂತಹ ನುಡಿಗಳು, ವ್ಯಕ್ತಿಜೀವನ ಶುದ್ಧ, ಪರಿಶುದ್ಧಬಾಳ್ವೆ, ಅವರು ಸಂಪಾದಿಸಿದ ಅಭಿನಂದನಾ ಗ್ರಂಥ 'ಸಿದ್ಧಗಂಗಾಶ್ರೀ' ಮರುಮುದ್ರಣ ಮಾಡಿಸಲಾಗುತ್ತದೆ. ಶ್ರೀ ಹೀ.ಚಿ. ಶಾಂತವೀರಯ್ಯನವರು ಮಾತನಾಡಿ ಎರೇಸೀಮೆ ಎಂದರೆ ಚೆನ್ನಪ್ಪ, ಚೆನ್ನಪ್ಪ ಎಂದರೆ ಎರೇಸೀಮೆ, ಪಂಡಿತರೆಂದರೆ ಜ್ಞಾನಿ ಎಂದರು. ಶ್ರೀ ಮಲ್ಲೇಪುರಂ ಜಿ. ವೆಂಕಟೇಶ್, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ಡಾ॥ ಬಿ. ನಂಜುಂಡಸ್ವಾಮಿ, ಶ್ರೀ ಹೆಚ್.ವಿ. ವೀರಭದ್ರಯ್ಯ, ಪ್ರೊ. ಸಿ.ಕೆ. ಜಗದೀಶ್, ಶ್ರೀ ಟಿ.ಕೆ. ನಂಜುಂಡಪ್ಪ, ಡಾ. ಸಿ. ಸೋಮಶೇಖರ್, ಶ್ರೀ ಎಸ್. ಪ್ಲೋಮಿನ್‌ದಾಸ್ ವಿವಿಧ ಗೋಷ್ಠಿಗಳಲ್ಲಿ ಮಾತನಾಡಿದರು. ಶ್ರೀ ವಿರೂಪಾಕ್ಷಪ್ಪ ಎರೇಸೀಮೆ, ಹಾವೇರಿ, ಡಾ.ವೈ. ತುಳುಜಪ್ಪ, ಡಾ. ರಾಜಶೇಖರ್, ಶ್ರೀ ಅಬ್ದುಲ್ ಹಮೀದ್, ಶ್ರೀ ಎಂ. ಈಶ್ವರಪ್ಪ ಉಪಸ್ಥಿತರಿದ್ದರು. ನಿರೂಪಣೆಯನ್ನು ಶ್ರೀಮತಿ ಲೋಕೇಶ್ವರಿಪ್ರಭು, ಶ್ರೀ ಪಿ.ಆರ್. ಸೋಮಶೇಖರ್, ಶ್ರೀ ಎಂ.ಜಿ. ಸಿದ್ಧರಾಮಯ್ಯ, ಶ್ರೀ ಕೋ.ರಂ. ಬಸವರಾಜು ವಂದನಾರ್ಪಣೆಯನ್ನು ಶ್ರೀಮತಿ ವಸಂತಮ್ಮ ಮಾಡಿದರು.

ಬೃಂದಾವನಸ್ಥರಾದ ಪೂಜ್ಯ ಶ್ರೀ ಪೇಜಾವರದ ವಿಶ್ವೇಶ್ವರ ತೀರ್ಥ ಶ್ರೀಗಳವರಿಗೆ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು "ಉಡುಪಿಯ ಪೇಜಾವರ ಶ್ರೀಗಳು ಸಾಮಾಜಿಕ ಹಾಗೂ ಧಾರ್ಮಿಕ ಬದಲಾವಣೆಯ ಹರಿಕಾರರಾಗಿದ್ದರು. ಶ್ರೀ ವಿಶ್ವೇಶತೀರ್ಥ ಶ್ರೀಗಳ ಸಾಮಾಜಿಕ ಹಾಗೂ ಧಾರ್ಮಿಕ ಸೇವೆ ಅಪಾರವಾದುದು. ಚಿಕ್ಕ ವಯಸ್ಸಿನಲ್ಲಿಯೇ ಸನ್ಯಾಸ ಸ್ವೀಕರಿಸಿ ಕರ್ನಾಟಕ ಮಾತ್ರವಲ್ಲದೆ, ರಾಷ್ಟ್ರದ ಉದ್ದಗಲಕ್ಕೂ ಧಾರ್ಮಿಕ ಕಾರ್ಯಗಳಲ್ಲಿ ಸಂಚರಿಸಿ ಬಂದವರು. ಈ ದೇಶಕ್ಕೆ ಅವರ ಸೇವೆ ಸ್ಮರಣೀಯವಾದುದು. ಉಡುಪಿಯಲ್ಲಿ ಶ್ರೀಕೃಷ್ಣನ ಅತಿ ಹೆಚ್ಚು ಪರ್ಯಾಯಗಳನ್ನು ಸ್ಥಾಪಿಸಿದ ಕೀರ್ತಿ ಶ್ರೀಗಳಿಗೆ ಸಲ್ಲಬೇಕು. ಸಿದ್ಧಗಂಗಾಮಠದೊಂದಿಗೆ ಪೂಜ್ಯ ಶ್ರೀಗಳವರೊಂದಿಗೆ ಅಪಾರ ಗೌರವ ಹಾಗೂ ಬಾಂಧವ್ಯವನ್ನು ಹೊಂದಿದ್ದರು. ಇಂತಹ ಶ್ರೀಗಳು ಎಲ್ಲರ ಹೃದಯದಲ್ಲಿ ವಿರಾಜಮಾನರಾಗಿದ್ದಾರೆ" ಎಂದರು.

* * *

ಶ್ರೀಮಠ ಮುಖವಾಣಿಯಾದ 'ಸಿದ್ಧಗಂಗಾ' ಮಾಸಪತ್ರಿಕೆ ಪತ್ರಿಕೆಯ ಸದಸ್ಯರಿಗೆ, ಪೋಷಕರಿಗೆ, ಮಹಾಪೋಷಕರಿಗೆ, ಜಾಹಿರಾತುದಾರರಿಗೆ, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘಕ್ಕೆ, ಮುದ್ರಣಾಲಯದ ಬಂಧುಗಳಿಗೆ, ಪತ್ರಿಕೆಯ ಸಂಪಾದಕರಿಗೆ, ಪ್ರಕಾಶಕರಿಗೆ, ಪತ್ರಿಕಾ ನಿರ್ವಹಣಾ ಸಮಿತಿಯವರಿಗೆ, ಎಲ್ಲರಿಗೂ ಹೊಸವರ್ಷ ೨೦೨೦ರ ಶುಭಾಶಯ ಕೋರುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಪ್ರಧಾನ ಸಂಪಾದಕರು







# ಶ್ರೀವಾಣಿ



ಶಿಕ್ಷಣದಿಂದ ಮನುಷ್ಯ ಸುಸಂಸ್ಕೃತನಾಗುತ್ತಾನೆ. ಮೃಗೀಯ ಭಾವನೆಗಳಿಂದ ಮುಕ್ತನಾಗುತ್ತಾನೆ. ರಾಕ್ಷಸ ಪ್ರವೃತ್ತಿಯಿಂದ ದೂರವಾಗುತ್ತಾನೆ. ಸಂಘಜೀವಿಯಾಗಿ ಸಮಾಜಪ್ರೇಮಿಯಾಗಿ, ಜೀವನಶ್ರದ್ಧೆಯನ್ನು ಬೆಳೆಸಿಕೊಳ್ಳುವನಾಗುತ್ತಾನೆ. ಕಲ್ಲು ಕಲೆಯಾಗುವಂತೆ, ಸೊಲ್ಲು ಶಿವನಾಗುವಂತೆ, ಕರ್ಕಶತೆ ಮಧುರತೆಯತ್ತ ನಡೆಯುವಂತೆ, ಕತ್ತಲಿಗಿಂದ ಬೆಳಕಿನ ಕಡೆಗೆ 'ತಮಸೋಮ ಜ್ಯೋತಿರ್ಗಮಯ' ಎನ್ನುವಂತೆ ನಡೆಯುವವನಾಗುತ್ತಾನೆ. 'ಮೃತ್ಯೋರ್ಮ ಅಮೃತಮಯ' ನಾಗುವಂತೆ ಎಲ್ಲ ಆಭರಣಗಳಿಗಿಂತ ಅಲ್ಲಮಪ್ರಭುಗಳು ಹೇಳುವಂತೆ 'ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ನಿನ್ನೊಡವೆ ಎಂಬುದು ಜ್ಞಾನರತ್ನ ಎನ್ನುವಂತೆ ಜ್ಞಾನರತ್ನ ಅಮೂಲ್ಯವೆಂದರಿತು ಮಾನವೀಯತೆಯ ಸುಂದರ ಆಭರಣವಾಗುತ್ತಾನೆ.

ಶಿಕ್ಷಣ ಸಂಸ್ಥೆಗಳು ಜ್ಞಾನದೇಗುಲಗಳು. ಪವಿತ್ರಮಂದಿರಗಳು. ಪರಿಶುದ್ಧ ಶೀಲಸದನಗಳು, ನ್ಯಾಯ ಕಮ್ಮಟಗಳು. ಜೀವನದ ಸಾರ್ಥಕತೆಯನ್ನು ತಿಳಿಸಿಕೊಡುವ ಅರಿವಿನಾಗರಗಳು. ಮೇಲೇರಿ ನಡೆಯುವ ಪಾವಟಿಗೆಗಳು. ಶಿಕ್ಷಣವನ್ನು ಮಾರಾಟದ ಸರಕನ್ನಾಗಿಸಿಬಾರದು. ಆ ಪ್ರವೃತ್ತಿ ಒಳ್ಳೆಯದಲ್ಲ. ಸೇವೆಯ ಸಾಧನ ಕ್ಷೇತ್ರವನ್ನಾಗಿಸಬೇಕು. ಪ್ರಾಜ್ಞರು ಹೇಳುವಂತೆ ಶಿಕ್ಷಣಕ್ಷೇತ್ರಗಳು ಚಂಚಲ ಮನಸ್ಸನ್ನು ಒಂದೆಡೆಗೆ ತಂದು ನಿಲ್ಲಿಸುವ, ಅಧೋಮುಖಿಯಾಗದಂತೆ ಸನ್ಮಾರ್ಗಗಾಮಿಯಾಗಿ ಮುನ್ನಡೆದು ಹುಟ್ಟಿದ ಮನೆಗೆ, ಊರಿಗೆ, ಕಲಿಸಿದ ಶಿಕ್ಷಣ ಸಂಸ್ಥೆಗೆ ಬಂಗಾರದ ಕಲಶವನ್ನಾಗಿಸುವ ಪವಿತ್ರ ದೇಗುಲಗಳು. ಹಸಿವಾದ ಹೊಟ್ಟೆಗೆ ಅನ್ನ ನೀಡಿ ತೃಪ್ತಿಗೊಳಿಸುವಂತೆ, ಹಸಿವಾದ ಮನಸ್ಸಿಗೆ ಜ್ಞಾನನೀಡಿ ತೃಪ್ತಿಗೊಳಿಸುವ ಜ್ಞಾನಸದನಗಳು.

* * *

ಸಿದ್ಧಗಂಗೆಯ ಇಂದಿನ ಸೇವಾ ದಾಸೋಹ ಮಣಿಹಕ್ಕೆ 'ತವನಿಧಿ'ಯಾಗಿರುವ ಪೂಜ್ಯ ಶ್ರೀ ಅಟವೀಸ್ವಾಮಿಗಳವರು ದೇಶಕಾಲವನ್ನು ಮೀರಿ ಬೆಳೆದು ಪ್ರಕಾಶಿಸುತ್ತಿರುವ ಜ್ಯೋತಿಸ್ವರೂಪರು. ಬಸವಣ್ಣನವರ ತತ್ತ್ವಾದರ್ಶಗಳನ್ನು ಸಾಕಾರಗೊಳಿಸುವಲ್ಲಿ 'ಉಣ್ಣದ ಲಿಂಗಕ್ಕೆ ಬೋನವ ಹಿಡಿ'ಯೆಂಬ 'ಉಂಬುವ ಜೀವಿಗೆ ನಡೆಯೆಂಬ' ಮೂಢತನವನ್ನು ಹೊಡೆದೋಡಿಸಿ, 'ಜಂಗಮಕ್ಕೆರೆದರೆ ಸ್ಥಾವರ ನೆನೆಯುತ್ತ' ಎಂಬುದನ್ನು ನಿತ್ಯದಲ್ಲಿ ನಿಜಾಚರಣೆ ಗೊಳಿಸಿದವರು. ಅಲ್ಲಿ ಸಲ್ಲುವುದಕ್ಕೆ ಇಲ್ಲಿ ಸಲ್ಲುವುದೇ ಆಧಾರವಾಯಿತು. ಪೂಜ್ಯರಿಗೆ ಅರಿವೇ ಗುರುವಾಯಿತು. ಆಚಾರವೇ ಶಿಷ್ಯವಾಯಿತು. ದಯವೇ ಧರ್ಮವಾಯಿತು. ಮಾಡಿ ನೀಡುವ ಹಸ್ತವೇ ಕಲ್ಯಾಣವಾಯಿತು. ನಿಂದುದೇ ನಿಜನಿವಾಸವಾಯಿತು. ಬಂದುದೇ ಪರಿಣಾಮವಾಯಿತು. ಕಾಯವೇ ಪೀಠ, ಪ್ರಾಣವೇ ಲಿಂಗವಾಯಿತು. ನಿದ್ರೆಗೈದರೆ ಜಪ, ಎದ್ದರೆ ಶಿವರಾತ್ರಿ, ನಡೆದುದೇ ಪಾವನ, ನುಡಿದುದೇ ಶಿವತತ್ತ್ವವಾಯಿತು. ದೇಹಧರಿಸಿಯೂ ನಿರ್ದೇಹಿಗಳಾಗಿ ಈ ಲೋಕದಲ್ಲಿರುವಾಗಲೇ ಜೀವನ್ಮುಕ್ತರಾಗಿ ಸಮಾಜದಲ್ಲಿದ್ದು ನಿಜವನರಿದ ನಿಶ್ಚಿಂತರಾಗಿ ಮಹವನರಿದ ಮಹಂತರಾಗಿ ಬಾಳಬೆಳಕಾದವರು. ಶರಣರು ಮೆಟ್ಟಿದ ಧರೆ ಪಾವನ ಕ್ಷೇತ್ರವೆಂಬುದನ್ನು ಪ್ರತ್ಯಕ್ಷಗೊಳಿಸಿದವರು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



ಪಂಚಾಕ್ಷರವೆ ಪಂಚಮುಖವಾಗಿ
ಎನ್ನ ಪಂಚೇಂದ್ರಿಯಂಗಳಾಗಿಪ್ಪವು ನೋಡಾ,
ಪ್ರಣಮವೆ ಪ್ರಾಣಮೂರ್ತಿಯಾಗಿರ್ದೆನಯ್ಯಾ,
ಇದು ಕಾರಣ ಪರಮ ತತ್ತ್ವಜ್ಞಾನಮಯವಾಗಿ
ಓಂ ನಮಃ ಶಿವಾಯ ಎಂಬ ಶಿವ ಷಡಕ್ಷರಿ ಮಂತ್ರವನೆ
ಸ್ಮರಿಸಿ ಭವಸಾಗರವ ದಾಟಿ ಭಕ್ತನಾದೆನು ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥

ಪಂಚಾಕ್ಷರವೆ – ಐದಕ್ಷರವೆ, ಪಂಚಮುಖವಾಗಿ – ಐದು ವದನವಾಗಿ, ಎನ್ನ ಪಂಚೇಂದ್ರಿಯಂಗಳಾಗಿಪ್ಪವು ನೋಡಾ – ಎನ್ನ ಐದಿಂದ್ರಿಯಂಗಳಾಗಿಪ್ಪವು ಕಂಡಾ, ಪ್ರಣಮವೆ – ಓಂಕಾರಪ್ರಣಮವೆ, ಪ್ರಾಣಮೂರ್ತಿಯಾಗಿರ್ದೆನಯ್ಯಾ – ಹರಣ ಕರ್ತೃವಾಗಿರ್ದೆನಯ್ಯಾ, ಇದು ಕಾರಣ – ಇದು ನಿಮಿತ್ಯಾರ್ಥ, ಪರತತ್ವ ಜ್ಞಾನಮಯವಾಗಿ–ಮಹಾಲಿಂಗತತ್ವ ಸ್ವರೂಪವಾಗಿ, ಓಂ ನಮಃ ಶಿವಾಯ ಎಂಬ ಶಿವ ಷಡಕ್ಷರಿ ಮಂತ್ರವನೆ, ಸ್ಮರಿಸಿ – ಜಪಿಸಿ, ಭವಸಾಗರವ – ಉತ್ಪತ್ಯವೆಂಬ ಸಮುದ್ರವನು, ದಾಟಿ – ಲಂಘಿಸಿ, ಭಕ್ತನಾದೆನು – ಶಿವಭಕ್ತನಾದನು, ಕಾಣಾ – ಕಂಡಾ, ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ– ಸಂಪಾದಕರು– ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು– ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಚಾರವೆಂಬುದು ಆಡಂಬರವಿರದಿರಲಿ
ಅಂತರಂಗದ ರತ್ನವಾಗಿರಲಿ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಣ್ಣ ಸಂಸಾರದ ಶಿವಯೋಗಾವಾಗಿಸಿದ
ಮರ್ತ್ಯದ ಮಣಿಹಕೆ ಬೆಳಕಾದ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಪೂಜೆಗೆ ಹೆಣ್ಣೇನು ಗಂಡೇನು
ಲಿಂಗಭೇದವೇಕೆ ತಿಳಿನೀನು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀಡುವನು ನಾನೆಂಬ ಮಾಡುವನು ನಾನೆಂಬ
ನಾಡಾಡಿ ಮಾತು ಬರದಿರಲಿ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೀಪದ ಕುಡಿಯಂತೆ ಮನವು ಚಂಚಲವಯ್ಯ
ತಾಪ ಪಡುತಿಹುದು ಒಳಗೊಳಗೆ । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೈಬಾಯಿ ಕಚ್ಚೆ ಶುದ್ಧವಿರಲಿ ಎಂದೆ
ಕಂಗಳಲಿ ಕಾಮ ಬರದಿರಲಿ । ತಿಳಿಯೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚಿತ್ತ ಚಿನ್ನವ ಮಾಡು ಸತ್ಯದೊಡನೆ ನಡೆಸು
ಉತ್ತಮ ವ್ಯಾಯಾಮದೊಳಗೂಡು । ತಿಳಿಯೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ಬಂಜೆಯ ಹೃದಯ ನೀರಿಲ್ಲದ ಬಾವಿ ತಾ
ದಯವಿಲ್ಲದ ಬಂಧುತಾ ಬರಿ ಶಿಲೆಯು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರ್ತವ್ಯ ಪ್ರಾರ್ಥನೆಯ ಸತ್ಯಸಂತಾನವು
ಮರ್ತ್ಯರಿಗೆ ಮಂತ್ರವು ನಿಜದರಿವು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನೆಗೆ ಬಾಗಿಲ ತೆರದಿ ಮನಕೆ ಬಾಗಿಲವಿರಲಿ
ಬೆಳಕು ಗಾಳಿಗೆ ಸದಾ ತೆರೆದಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



## ಪ್ರಕಟಣೆ



# ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪ್ರಥಮ ಪುಣ್ಯಸಂಸ್ಮರಣೋತ್ಸವ

ಪದ್ಮಭೂಷಣ, ಕರ್ನಾಟಕ ರತ್ನ, ಬಸವಪ್ರಶಸ್ತಿ ಪುರಸ್ಕೃತರು, ತ್ರಿವಿಧ ದಾಸೋಹಿಗಳು, ಮಹಾತಪಸ್ವಿಗಳೂ, ಶ್ರೀ ಮ.ನಿ.ಪ್ರಣವಸ್ವರೂಪಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪ್ರಥಮ ಪುಣ್ಯ ಸ್ಮರಣೋತ್ಸವವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ **ಜನವರಿ ೧೯, ೨೦೨೦, ಭಾನುವಾರ ಬೆಳಿಗ್ಗೆ ೧೦.೩೦ ಗಂಟೆಗೆ** ಆಯೋಜಿಸಲಾಗಿದ್ದು ಸಮಾರಂಭದ ದಿವ್ಯನೇತೃತ್ವವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಅಧ್ಯಕ್ಷತೆಯನ್ನು ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ವಹಿಸಲಿದ್ದು, ಬೇಲಿಮಠದ ಶಿವಾನುಭವ ಚರಮೂರ್ತಿ ಪರಮಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ಹಾಗೂ ಕನಕಪುರ ಶ್ರೀ ದೇಗುಲಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ದಿವ್ಯ ಉಪಸ್ಥಿತಿಯಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪನವರು ಉದ್ಘಾಟಿಸಲಿದ್ದಾರೆ.

ಸಮಾರಂಭದಲ್ಲಿ ದೆಹಲಿಯ ಕೈಗಾರಿಕೋದ್ಯಮಿಗಳಾದ ಸನ್ಮಾನ್ಯ ಮುಖೇಶ್ ಗರ್ಗ್ ಹಾಗೂ ನವದೆಹಲಿ ಉಗ್ರ ನಿಗ್ರಹದಳದ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಮಣೀಂದರ್‌ಜೀತ್ ಸಿಂಗ್ ಬಿಟ್ಟ ಅವರನ್ನು ಸನ್ಮಾನಿಸಲಾಗುತ್ತಿದೆ.

ಈ ಪುಣ್ಯಸ್ಮರಣೋತ್ಸವ ಸಮಾರಂಭದಲ್ಲಿ ಕರ್ನಾಟಕ ಸರ್ಕಾರದ ಉಪ ಮುಖ್ಯಮಂತ್ರಿಗಳು, ಸಚಿವರು, ಲೋಕಸಭಾ ಸದಸ್ಯರು, ಶಾಸಕರು, ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಮಹಾಪೌರರೂ, ಗಣ್ಯರು, ಭಕ್ತರು, ಅಭಿಮಾನಿಗಳು ಭಾಗವಹಿಸಲಿದ್ದಾರೆ.

**ಸರ್ವರಿಗೂ ಆದರದ ಸುಸ್ವಾಗತ**

# ಕಾವ್ಯನಮನ

## 'ಶತಾಯುಷಿ'ಗೆ ನಮನ

ನಡೆದಾಡುವ ದೇವರು
ಶಿವಕುಮಾರ ಶ್ರೀಗಳು
ಶಿವಸ್ವರೂಪಿ ಸನ್ಮಂಗಲ ಶರಣಮೂರ್ತಿ
ಅನ್ನ ವಿದ್ಯೆಯ ನೀಡಿ
ವಾಸ್ತವ್ಯದಾಸರೆ ಮಾಡಿ
ಬೆಳೆವ ಕುಡಿಗಳಿಗೆ ಬೆಳಕಿತ್ತ ಮಹಾಕೀರ್ತಿ.

ಸಿದ್ಧಗಂಗಾ ಮಠಾಧಿಪತಿ
ಸಿದ್ಧಿ ಪುರುಷ ಮೌಲ್ಯಯತಿ
ಘನ ವೈರಾಗ್ಯ ನಿಧಿಯು ದೈವಿ ಸಂಭೂತ ತಾತ
ಮಕ್ಕಳೊಡನೆ ಮಗುವಾಗಿ
ಮಮತೆಯ ಮಡಿಲಾಗಿ
ಒಡನಾಟ ಪ್ರೀತಿಯ ಪಂಕ್ತಿಯೂಟ ನಿರತ.

ಶತಮಾನದಂಚನ್ನು ದಾಟಿ
ಮುನ್ನಡೆದ ದೀರ್ಘಾಯುಷಿ
ಅಸಾಮಾನ್ಯ ಶಕ್ತಿಯ ನೆಲೆ ಅದಮ್ಯ ಚೇತನ
ದಣಿವು ಬೇಸರಿಕೆ ಇಲ್ಲ
ಮುಪ್ಪು ಮನಸಿಗೆ ಇಲ್ಲ
ಕ್ರಿಯಾಶೀಲದ ಚಿಲುಮೆ ಅತ್ಯಮೂಲ್ಯ ಜೀವನ.

ಜಗದ ಚಿಂತಾಮಣಿಯೆ
ಕರುನಾಡ ಭಾಗ್ಯಶ್ರೀಯೆ
ಧರೆಯೊಳಗೆ ಜನ್ಮವೆತ್ತಿ ಬಂದ ಪುಣ್ಯಾತ್ಮನೆ
ಬಸವತತ್ವ ಪ್ರತಿಪಾದಕ
ತ್ರಿವಿಧ ದಾಸೋಹಕಾರಕ
ಕಾಯಕದ ಕೈವಲ್ಯ ನಿಧಿ ನೀ ಪಾವನಾತ್ಮನೆ.

ಸಿದ್ಧಗಂಗಾ ಮಠ ಕ್ಷೇತ್ರ
ಭೂಕೈಲಾಸವಾಗಿಹುದು
ಭಕ್ತಿಯ ಪರಾಕಾಷ್ಠೆ ಇಲ್ಲಿ ಮೆರೆದು ನಿಂತಿಹುದು
ಶಿವನ ಕುಮಾರನಾದ
'ಶಿವಕುಮಾರ' ಶಿವಯೋಗಿಯ
ಮಹಿಮೆ ದಶದಿಕ್ಕಿಗೂ ಹರಡಿ ನಿಂದಿಹುದು.

– ಗುರುಸಿದ್ಧಯ್ಯ ಹಿರೇಮಠ
ಕುಡಚಿ, ಬೆಳಗಾವಿ

## ಸಿದ್ದಗಂಗೆಯ ಶಿವ..

ಈಗ ಬೆಳ್ಳಿಯ ಬೆಳಕಾದಿರಾ
ಗುರುಗಳೆ...
ಬೆಳ್ಳಿಯ ಬೆಟ್ಟದ ಮೇಲೆ
ಕುಳಿತಿರಾ ಗುರುದೇವರೆ..
ಬಂಗಾರದ ಶಿವನಾದಿರಾ..
ಶಿವದೇವರೆ....!

ಬಯಲು ಬಯಲಲಿ
ತೇಲಿ ಬರುವ ಬಯಲುಗಳಲಿ
ಮಹಾ ಬಯಲನು ಹಿಡಿದು
ಅನ್ನವ ಮಹಾ ಪ್ರಸಾದ ವಾಗಿಸಿ
ಜಂಗಮಗೊಳಿಸಿದಿರಿ...

ಅಲ್ಲಿನ ತಂಗಾಳಿಯನು
ವಿದ್ಯೆಯ ಮಾಡಿ ಮಹಾಜ್ಞಾನವನು
ಜಂಗಮಗೊಳಿಸಿದಿರಿ..!!

ದಿವ್ಯ ಪಾದಗಳಲಿ ಬೆಳಕು
ತೋರಿ ಮಹಾಬೆಳಕನು
ಜಂಗಮಗೊಳಿಸಿದಿರಿ....!!!

ಬೆಳ್ಳಿ ಬೆಟ್ಟವನ್ನು ಏರಿ
ಶಿವನೇಯಾದಿರಿ..ಕರುನಾಡ
ಸಿದ್ದಗಂಗೆಯಲಿ..
ಅಮೃತ ಧಾರೆಯ ಹರಿಸಿ
ಜಗದ ಜೀವಗಳ ಸ
ಸಂಜೀವಿನಿಯಾದಿರಿ
ಗುರು ದೇವರೆ...!!!

ಈಗ ಕನ್ನಡದ ಕಂದ ಕೃಷ್ಣನಾಯಕರ
ಮನದಲಿ ಚುಳುಕಾಗಿ ಕುಳಿತು
ಬೆಳ್ಳಿಯ ಬೆಳಕಾದಿರಿ..
ಕರುನಾಡ ಜನರ ನೆನಪಲಿ
ಬಂಗಾರವಾದಿರಾ.. !!!
ಗುರುದೇವರೆ.....

- ರವೀಂದ್ರನಾಥ ದೊಡ್ಡಮೇಟಿ.



# ಶ್ರೀ ಸಿದ್ಧಗಂಗಾ ಮಠಕ್ಕೆ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿ ಭೇಟಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆಗೆ ವಿಶೇಷಪೂಜೆ


ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಪರಮಪೂಜ್ಯ ಶ್ರೀ ಶ್ರೀಗಳವರ ಗದ್ದುಗೆಗೆ ಪೂಜೆ ಸಲ್ಲಿಸಿ ಹೊರಬರುತ್ತಿರುವುದು

ಜನವರಿ ೨, ೨೦೨೦ ರಂದು ಶ್ರೀಮಠದಲ್ಲಿ ಹಬ್ಬದ ವಾತಾವರಣ. ಭಾರತ ಕಂಡ ಅಪರೂಪದ ಪ್ರಧಾನಮಂತ್ರಿ ಸನ್ಮಾನ್ಯ ಶ್ರೀ ನರೇಂದ್ರ ಮೋದಿ ಅವರ ಆಗಮನ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗದ್ದುಗೆಯನ್ನು ವಿವಿಧ ಬಗೆಯ ಪುಷ್ಪಗಳಿಂದ ಸಿಂಗರಿಸಲಾಗಿತ್ತು. ಗುದ್ದುಗೆಯ ಒಳಭಾಗದಲ್ಲಿ ಲಿಂಗದ ಮುಂದೆ ಭಾರತದ ಭೂಪಟವನ್ನು ಪುಷ್ಪಗಳಿಂದ ರಚಿಸಿ ಸಿಂಗರಿಸಲಾಗಿತ್ತು.

ಭಾರತದ ಪ್ರಧಾನಿಯೊಬ್ಬರು ತಮ್ಮ ಅಧಿಕಾರವಧಿಯಲ್ಲಿ ಎರಡು ಬಾರಿ ಮಠಕ್ಕೆ ಆಗಮಿಸುವುದರ ಮೂಲಕ ದಾಖಲೆಯನ್ನು ಬರೆದರು. ಮೊದಲ ಬಾರಿ ಬಂದಾಗ (೨೪-೯-೨೦೧೪) ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ತಲೆಬಾಗಿ ಭಕ್ತಿಯಿಂದ ನಮಸ್ಕರಿಸಿ ಆಶೀರ್ವಾದ ಪಡೆದು ಧನ್ಯರಾಗಿದ್ದರು. ಆ ಸಂದರ್ಭದಲ್ಲಿ ಹೃದಯ ತುಂಬಿ ಮಾತನಾಡಿದ್ದ ಶ್ರೀ ಮೋದಿಯವರು "ತಾವು ಹಮ್ಮಿಕೊಂಡಿರುವ ಸ್ವಚ್ಛಭಾರತವನ್ನು ಕೊಡುವಲ್ಲಿ ಪೂಜ್ಯ ಸ್ವಾಮೀಜಿಯವರ ಆಶೀರ್ವಾದದಿಂದ, ಇದರಲ್ಲಿ ಸಫಲರಾಗುತ್ತೇವೆಂಬ ಪೂರ್ಣ ವಿಶ್ವಾಸವನ್ನು ವ್ಯಕ್ತಪಡಿಸಿದ್ದರು. ಪರಮಪೂಜ್ಯ ಶ್ರೀಗಳವರು ಕಾಶ್ಮೀರ ಪ್ರವಾಹ ಪೀಡಿತರಿಗೆ ೨೫ ಲಕ್ಷ ರೂ.ಗಳ ಚೆಕ್‌ನ್ನು ನೀಡಿದಾಗ ಕೃತಜ್ಞತೆಯಿಂದ ಸ್ವೀಕರಿಸಿದ್ದ ಶ್ರೀ ಮೋದಿಯವರು ಪೂಜ್ಯ ಸ್ವಾಮೀಜಿಯವರು ನಮ್ಮ ದೇಶದ ದೊಡ್ಡಶಕ್ತಿ, ಪೂಜ್ಯ ಸ್ವಾಮೀಜಿಯವರ ಆಶೀರ್ವಾದದಿಂದ ಭಾರತದ ಭವಿಷ್ಯ ಬದಲಾಗುತ್ತದೆ ಎಂಬ ಆಶಯವನ್ನು ವ್ಯಕ್ತಪಡಿಸಿದ್ದ ಪ್ರಧಾನಮಂತ್ರಿಗಳು ಇಂದು







ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು
ಬಿಲ್ವಪತ್ರೆ ಸಸಿಯನ್ನು ನೆಡುತ್ತಿರುವುದು

ನಮಗೆ ಪೂಜ್ಯ ಸ್ವಾಮೀಜಿಯವರ ಪಾದದಡಿಯಲ್ಲಿ ಕುಳಿತುಕೊಳ್ಳುವ ಸದಾವಕಾಶ ದೊರಕಿದೆ. ಅವರ ದರ್ಶನ ಭಾಗ್ಯ ದೊರಕಿತು" ಎಂದು ಹೃದಯ ತುಂಬಿ ಮಾತನಾಡಿದ್ದರು.

"ಈ ಬಾರಿ ಭೇಟಿ ನೀಡಿದಾಗ ಪರಮಪೂಜ್ಯರ ಅನುಪಸ್ಥಿತಿ ಎದ್ದು ಕಾಣುತ್ತಿದೆ. ಶೂನ್ಯಭಾವನೆ ಆವರಿಸಿದೆ" ಎಂದು ನುಡಿದುದು ಪೂಜ್ಯ ಶ್ರೀಗಳವರ ಬಗ್ಗೆ ಅವರಿಲ್ಲಿದ್ದ ಅನನ್ಯ ಭಕ್ತಿ, ಗೌರವವನ್ನು ಸೂಚಿಸುತ್ತದೆ. ನವೆಂಬರ್ ೨೮ ರಂದು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ದೆಹಲಿಗೆ ಹೋಗಿ ಜನವರಿ ೧೯ ರಂದು ನಡೆಯಲಿರುವ ಪರಮಪೂಜ್ಯರ ಮೊದಲ ಪುಣ್ಯಸ್ಮರಣೆ ಸಮಾರಂಭಕ್ಕೆ ಶ್ರೀ ನರೇಂದ್ರ ಮೋದಿಯವರನ್ನು ಆಹ್ವಾನಿಸಿದ್ದುದನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬಹುದು.

ಪ್ರಧಾನಮಂತ್ರಿಗಳು ಶ್ರೀಮಠಕ್ಕೆ ಆಗಮಿಸಿದಾಗ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹೂಗುಚ್ಛ ನೀಡಿ ಬರಮಾಡಿಕೊಂಡರು ಪ್ರಧಾನಮಂತ್ರಿಗಳು ಪೂಜ್ಯ ಶ್ರೀಗಳವರು, ಮುಖ್ಯಮಂತ್ರಿ ಶ್ರೀ ಬಿ.ಎಸ್ ಯಡಿಯೂರಪ್ಪ, ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಶಿ, ಶ್ರೀ ಸದಾನಂದಗೌಡ, ಶ್ರೀ ಸುರೇಶ ಅಂಗಡಿ ಹಾಗೂ ರಾಜ್ಯ ಸಚಿವರಾದ ಶ್ರೀ ವಿ. ಸೋಮಣ್ಣ, ಶ್ರೀ ಮಾಧುಸ್ವಾಮಿ ಅವರೊಂದಿಗೆ ಗದ್ದುಗೆಗೆ ಪ್ರವೇಶಿಸಿದರು. ಶ್ರೀ ನರೇಂದ್ರ ಮೋದಿಯವರು ಜ್ಯೋತಿ ಬೆಳಗುವುದರ ಮೂಲಕ ಭಕ್ತಿಯನ್ನು ಸಮರ್ಪಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಮೋದಿಯವರ ಹಣೆಗೆ ವಿಭೂತಿ ಧಾರಣೆ ಮಾಡಿ, ರುದ್ರಾಕ್ಷಿಮಾಲೆ ಹಾಕಿ, ಬಿಳಿ ಶಾಲನ್ನು ಹೊದಿಸಿ, ಹಾರ ಹಾಕಿ, ಪ್ರಸಾದ ನೀಡಿ ಆಶೀರ್ವದಿಸಿದರು. ನಂತರ ಪೂಜ್ಯ ಶ್ರೀಗಳವರೊಂದಿಗೆ ಗದ್ದುಗೆಗೆ ಪ್ರದಕ್ಷಿಣೆ ಹಾಕಿದ ಶ್ರೀ ಮೋದಿಯವರು ಕಾರ್ಯಕ್ರಮ ನಡೆಯುವ ಸಭಾವೇದಿಕೆಗೆ ಆಗಮಿಸಿದರು. ಇದಕ್ಕೂ ಮುನ್ನ ಗದ್ದುಗೆಯ ಪಕ್ಕದಲ್ಲಿ ಬಿಲ್ವಪತ್ರೆ ಸಸಿಯನ್ನು ನೆಟ್ಟು ನೀರೆರೆದರು.

ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಸ್ಮಾರಕ ವಸ್ತು ಸಂಗ್ರಹಾಲಯಕ್ಕೆ ಶಂಕು ಸ್ಥಾಪನೆ ನೆರವೇರಿಸಿ ಮಾತನಾಡಿದ ಶ್ರೀ ಮೋದಿಯವರು "ಸಿದ್ಧಗಂಗಾ ಮಠದ ಶಕ್ತಿ ದೇಶದ ಸಮಸ್ತ ಜನರಿಗೂ ಪ್ರೇರಣದಾಯಕವಾಗಿದೆ. ೨೦೨೦ರ ಹೊಸ ವರ್ಷವನ್ನು ತುಮಕೂರಿನ ಸಿದ್ಧಗಂಗಾ ಮಠದ ಪವಿತ್ರ ಭೂಮಿಯಿಂದ ಪ್ರಾರಂಭ ಮಾಡುತ್ತಿರುವುದು ನನ್ನ ಸೌಭಾಗ್ಯ. ಬಹಳ ವರ್ಷಗಳ ನಂತರ ಈ ಪುಣ್ಯಸ್ಥಳಕ್ಕೆ ಬರುವ ಅವಕಾಶ ದೊರೆತಿದೆ. ಆದರೆ ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿಯವರ ಅನುಪಸ್ಥಿತಿ ತಮಗೆ ಶೂನ್ಯದ ಅನುಭವ ನೀಡುತ್ತಿದೆ" ಎಂದು ಹೇಳಿದರು.

ಶ್ರೀಮಠದ ಮಕ್ಕಳನ್ನುದ್ದೇಶಿಸಿ ಮಾತನಾಡಿದ ಪ್ರಧಾನಮಂತ್ರಿಗಳು "ಎಲ್ಲರಿಗೂ ಸಮಾನ ಶಿಕ್ಷಣ ನೀಡುವಂತಹ ಪವಿತ್ರ ಗಂಗೆ ಹರಿಯುತ್ತಿರುವ ಈ ಪುಣ್ಯ ಕ್ಷೇತ್ರದಲ್ಲಿ ಶ್ರೀ ಶಿವಕುಮಾರ ಸ್ವಾಮೀಜಿಯವರ



ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು
ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಿರುವುದು









ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರೊಂದಿಗೆ
ಹರಗುರು ಚರಮೂರ್ತಿಗಳು

ದೂರದೃಷ್ಟಿಯುಳ್ಳ ಉತ್ತಮ ಸೇವಾ ಕಾರ್ಯಗಳು ಎಂದೆಂದಿಗೂ ಅಚ್ಚಳಿಯದೆ ಎಲ್ಲರ ಮನದಲ್ಲಿ ಉಳಿಯುತ್ತದೆ" ಎಂದು ಅಭಿಪ್ರಾಯಪಟ್ಟರು. "ಇಂತಹ ಮಹಾಸಂತರ ಹೆಸರಿನಲ್ಲಿ ಮಠದ ವತಿಯಿಂದ ವಸ್ತು ಸಂಗ್ರಹಾಲಯ ನಿರ್ಮಿಸಲು ಮುಂದಾಗಿರುವುದು ಹರ್ಷದ ಸಂಗತಿ" ಎಂದರು. ಇದೇ ಸಂದರ್ಭದಲ್ಲಿ ಪೇಜಾವರ ಶ್ರೀಗಳವರ ಸೇವೆಯನ್ನು ಸ್ಮರಿಸಿದರು.

ತಮ್ಮ ಭಾಷಣದಲ್ಲಿ ದೇಶದ ಅಭಿವೃದ್ಧಿಯ ನಿಟ್ಟಿನಲ್ಲಿ ಮೂರು ಸೂತ್ರಗಳನ್ನು ಪ್ರಸ್ತಾಪಿಸಿದ ಪ್ರಧಾನಮಂತ್ರಿಗಳು, ಸಂಸ್ಕೃತಿ, ಪ್ರಕೃತಿ ಹಾಗೂ ಜಲಸಂರಕ್ಷಣೆಯ ಅನುಷ್ಠಾನಕ್ಕಾಗಿ ಸಂತರ ನೆರವು ಕೋರಿದರು. ಈ ಮೂರು ಅಂಶಗಳ ಬಗ್ಗೆ ಜನ ಜಾಗೃತಿ ಮೂಡಿಸುವಲ್ಲಿ ಸಂತರು ಸಹ ಭಾಗಿಯಾಗಬೇಕು ಎಂದು ಮನವಿ ಮಾಡಿದರು.

ಪ್ರಧಾನಮಂತ್ರಿಗಳಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬೆಳ್ಳಿಪುತ್ಥಳಿಯನ್ನು ನೀಡಿ ಶಾಲು ಹೊದಿಸಿ ಗಂಧದ ಹಾರ ಹಾಕಿ ಸನ್ಮಾನಿಸಿ ಆಶೀರ್ವದಿಸಿದರು.

ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ಶ್ರೀಕ್ಷೇತ್ರವು ೬೦೦-೭೦೦ ವರ್ಷಗಳ ಪವಿತ್ರ ಇತಿಹಾಸ ಹಾಗೂ ಪರಂಪರೆಯನ್ನು ಹೊಂದಿರುವುದು. ಗೋಸಲ ಸಿದ್ಧೇಶ್ವರರಿಂದ ಪ್ರಾರಂಭಗೊಂಡ ಈ ಕ್ಷೇತ್ರ ಅನೇಕ ಸಿದ್ಧಪುರುಷರು, ತಪೋಧನರು, ಶಿವ ಯೋಗಿಗಳು ತಪಸ್ಸುಗೈದು ಪಾವನಗೊಳಿಸಿದ್ದಾರೆ. ೧೨ನೇ ಶತಮಾನದ ಬಸವಾದಿ ಶರಣರ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಆರ್ಥಿಕ ಕ್ರಾಂತಿಯ ನಂತರ ಅವರ ಎಲ್ಲ ಕಾರ್ಯಗಳನ್ನು ಮುಂದುವರಿಸಿದವರು ತೋಂಟದ ಸಿದ್ಧಲಿಂಗೇಶ್ವರರು, ಅಂತಹ ಮಹಾಮಹಿಮರು ಇಲ್ಲಿ ತಪವನ್ನು ಮಾಡಿ ಶ್ರೀಕ್ಷೇತ್ರದ ಅಧಿದೇವತೆಯಾಗಿದ್ದಾರೆ.

೧೯ನೇ ಶತಮಾನದ ಆದಿಯಲ್ಲಿ ಶ್ರೀ ಆಟವಿ ಶಿವಯೋಗಿಗಳು ಉತ್ತರ ಭಾಗದಿಂದ ಆಗಮಿಸಿ ಇಲ್ಲಿಯ ಪವಿತ್ರ ಪರಿಸರಕ್ಕೆ ಮನಸೋತು ಅನೇಕ ವರ್ಷಗಳ ಕಾಲ ಇಲ್ಲಿ ನೆಲಸಿ ದಾಸೋಹ ಹಾಗೂ ಶಿಕ್ಷಣಕ್ಕೆ ಒಂದು ಹೊಸ ತಿರುವನ್ನು ನೀಡಿದರು. ಆನಂತರ ಬಂದ ಶ್ರೀ ಉದ್ದಾನ ಶಿವಯೋಗಿಗಳು ಅಧಿಕೃತವಾಗಿ ಸಂಸ್ಕೃತ ಪಾಠಶಾಲೆಯನ್ನು ಪ್ರಾರಂಭಿಸುವುದರ ಜೊತೆಗೆ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಿದರು. ಅವರು ಶಿಕ್ಷಣದ ಬಗ್ಗೆ ಹಾಗೂ ಮುಂದಿನ ಪೀಳಿಗೆಯ ಬಗ್ಗೆ ಇಟ್ಟ ಕಾಳಜಿಯನ್ನು ಊಹಿಸಲು ಸಾಧ್ಯವಾಗುವುದಿಲ್ಲ. ಅಂದು ಅವರು ಪ್ರಾರಂಭಿಸಿದ ನಿಲಯದಲ್ಲಿ ಜಾತಿ, ಮತ, ಪಂಥ ಭೇದವಿಲ್ಲದೆ ಎಲ್ಲ ಮಕ್ಕಳಿಗೂ ಅವಕಾಶ ಮಾಡಿದ ಮಹನೀಯರಾಗಿದ್ದಾರೆ.

**"ಆಯಂ ನಿಜಃ ಪರೋವೇತಿ ಗಣನಾಲಘುಚೇತಸಾಂ,**
**ಉದಾರ ಚರಿತಾ ನಾಂತುಂ ವಸುದೈವ ಕುಟುಂಬಕಂ"**

ಎಂಬ ಮಾತಿನಂತೆ ಅವರು ವಸುದೈವ ಕುಟುಂಬಿಗಳಾಗಿ ಬೆಳಗಿದವರು. ೧೯೩೦ರಲ್ಲಿ ಪಟ್ಟಾಭಿಷಕ್ತರಾದ ಪರಮಪೂಜ್ಯ ಗುರುದೇವರಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀಮಠದ ಸೇವಾ ಕಾರ್ಯಗಳನ್ನು ಸಹಸ್ರ ಪಟ್ಟು ವಿಸ್ತರಿಸಿದರು. ಕೇವಲ ಬೆರಳಣಿಕೆಯಷ್ಟಿದ್ದ ವಿದ್ಯಾರ್ಥಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಬೆಳೆದು ೧೦ ಸಹಸ್ರ ವಿದ್ಯಾರ್ಥಿಗಳ ಬದುಕಿಗೆ ಶಿಕ್ಷಣ ಹಾಗೂ ಜೀವನ





ಮೌಲ್ಯಗಳನ್ನು ಕೊಡುವುದರ ಮೂಲಕ ಈ ನಾಡಿನ ಸತ್ಪ್ರಜೆಗಳನ್ನಾಗಿಸಿದ್ದಾರೆ. ಒಂದು ಧರ್ಮ ಪೀಠದ ಪೀಠಾಧಿಪತಿಗಳಾಗಿ ೮೯ ವರ್ಷಗಳ ಕಾಲ ಸೇವೆ ಸಲ್ಲಿಸಿದ ಪೂಜ್ಯ ಶಿವಕುಮಾರ ಮಹಾಶಿವಯೋಗಿಗಳಿಗೆ ಸಲ್ಲುತ್ತದೆ. "ಕಾಯಕವೇ ಕೈಲಾಸ"ವೆಂಬ ಬಸವಣ್ಣನವರ ತತ್ತ್ವವನ್ನು ತಮ್ಮ ಬದುಕಿನುದ್ದಕ್ಕೂ ಆಚರಿಸುವುದರ ಮೂಲಕ ಇಂದು ನಮ್ಮಗಳ ದಾರಿದೀಪವಾಗಿದ್ದಾರೆ.

ಅವರು ತಪಸ್ಸು, ತ್ಯಾಗ, ಸೇವೆ, ಶಿವಯೋಗ ದಿಂದಾಗಿ ಶ್ರೀಮಠವನ್ನು ಇನ್ನೊಂದು ಸೇವಾ ಮುಖಿ ಯಾಗಿಸಿದ್ದಾರೆ. ಪೂಜ್ಯರು ಗ್ರಾಮೀಣ ಜನತೆ ಮೇಲೆ ಇಟ್ಟಿರುವ ಪ್ರೀತಿ, ವಾತ್ಸಲ್ಯಗಳಿಗೆ ಪೂಜ್ಯರು ಸ್ಥಾಪಿಸಿರುವ ೧೩೦ಕ್ಕೂ ಹೆಚ್ಚು ಗ್ರಾಮಾಂತರ ಶಾಲೆಗಳೇ ಸಾಕ್ಷಿಯಾಗಿವೆ.

**ಹಸಿವೆಂಬ ಹೆಬ್ಬಾವು ಬಸುರ ಬಂದು**
**ಹಿಡಿದಿಡಲು ವಿಷವೇರಿತ್ತಯ್ಯ**
**ಆಪಾರ ಮಸ್ತಕಕ್ಕೆ ಹಸಿವಿಗನ್ನವನಿಕ್ಕಿ**
**ವಿಷ ಇಳುಹ ಬಲ್ಲಡೆ ಆತನೇ ಗಾರುಡಿಗ ಕಾಣಾ**
**ರಾಮನಾಥ.**

ದೇವರ ದಾಸೀಮಯ್ಯರ ವಚನದಂತೆ ನಾಡಿನಲ್ಲಿದ್ದ ಹಸಿವು ಮತ್ತು ಅನಕ್ಷರತೆಯನ್ನು ಹೋಗಲಾಡಿಸಿದ ಗಾರುಡಿಗರಾಗಿದ್ದಾರೆ. ಅಂತಹ ಮಹಾಶಿವಯೋಗಿಗಳ ಗದ್ದುಗೆಯ ದರ್ಶನಕ್ಕೆ ಗೌರವಾನ್ವಿತ ಪ್ರಧಾನಮಂತ್ರಿಗಳು ಆಗಮಿಸಿರುವುದು ಶ್ರೀಮಠದ ಭಕ್ತಾದಿಗಳಿಗೆ ಅತೀವ ಸಂತೋಷ ಹಾಗೂ ವಿದ್ಯಾರ್ಥಿಗಳಿಗೆ ಸ್ಫೂರ್ತಿಯನ್ನುಂಟು ಮಾಡಿದೆ.

Let their message, words and work remain a beacon light to all of us and to the future generation.

I pray God almighty and our Guruji to shower blessings on Narendra Modiji to continue his valuable service to the nation.

ಇದೇ ಸಂದರ್ಭದಲ್ಲಿ ಶ್ರೀಮಠದ ಅನನ್ಯ ಭಕ್ತರಾಗಿದ್ದು ಶ್ರೀಗಳ ಆಶೀರ್ವಾದಕ್ಕೆ ಪಾತ್ರರಾಗಿದ್ದ ಈ ನಾಡಿನ ಅತ್ಯಂತ ಜನಪ್ರಿಯ ಮುಖ್ಯಮಂತ್ರಿಗಳಾಗಿ, ಹುಟ್ಟು ಹೋರಾಟಗಾರರಾಗಿ ಅನೇಕ ಏಳುಬೀಳುಗಳು ಬಂದರು ಸಹ ನಾಡನ್ನು ಸರ್ವತೋಮುಖ ಅಭಿವೃದ್ಧಿ ಪಥದಲ್ಲಿ ಕೊಂಡೊಯ್ಯಲು ಹಗಲಿರಳು ಶ್ರಮಿಸುತ್ತಿರುವುದು ಶ್ಲಾಘನೀಯ. ಅವರು ಕೂಡ ಈ ಸಭೆಯಲ್ಲಿ ಪಾಲ್ಗೊಂಡಿರುವುದು, ಹಾಗೆಯೇ ಕೇಂದ್ರದ ಸಚಿವರಾದ ಪ್ರಹ್ಲಾದ ಜೋಷಿಯವರು ಮತ್ತು ಕರ್ನಾಟಕ ಸರ್ಕಾರದ ಮಂತ್ರಿವರ್ಯರಾದ ಶ್ರೀ ವಿ. ಸೋಮಣ್ಣನವರು, ಶ್ರೀ ಮಾಧುಸ್ವಾಮಿಯವರು ಈ ಸಮಾರಂಭದ ಯಶಸ್ವಿಗೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿರುತ್ತಾರೆ. ಅವರೆಲ್ಲರಿಗೆ ಅಭಿನಂದಿಸುತ್ತಾ, ಕರ್ನಾಟಕ ಸರ್ಕಾರ, ತುಮಕೂರು ಜಿಲ್ಲಾ ಆಡಳಿತ, ಪೊಲೀಸ್ ಇಲಾಖೆ ಹಾಗೂ ಇತರೆ ಎಲ್ಲಾ ಅಧಿಕಾರಿ ವರ್ಗದವರಿಗೆ ಮತ್ತು ಪತ್ರಿಕಾ ಮಾಧ್ಯಮಕ್ಕೆ ಅಭಿನಂದಿಸುತ್ತಾ, ಪ್ರಧಾನ ಮಂತ್ರಿಗಳಿಗೆ ಶ್ರೀಮಠದ ಪರವಾಗಿ ಮತ್ತೊಮ್ಮೆ ಧನ್ಯವಾದಗಳನ್ನು ಹೇಳುತ್ತಾ ಎಲ್ಲರಿಗೂ ಶುಭವನ್ನು ಕೋರುತ್ತೇವೆ" ಎಂದರು.

ಮಾನ್ಯ ವಸತಿ ಹಾಗೂ ತೋಟಗಾರಿಕೆ ಸಚಿವರಾದ ಸನ್ಮಾನ್ಯ ಶ್ರೀ ವಿ. ಸೋಮಣ್ಣನವರು ಸರ್ವರನ್ನು ಸ್ವಾಗತಿಸಿದರು.

## ಸಿದ್ಧಗಂಗಾ ಮಾಸಪತ್ರಿಕೆ

**ಮಹಾಪೋಷಕರು : (ಹತ್ತು ಸಾವಿರ ರೂ.ಗಳು)**

೧. ವಿಜಯಕುಮಾರ್ ಡಿ.ಆರ್. ದಾವಣಗೆರೆ.
೨. ಮಲ್ಲಣ್ಣ ಎಸ್., ಮೈಸೂರು.
೩. ಶಿವಾನಂದ ಶರ್ಮ, ಬೆಂಗಳೂರು.
೪. ಕೆ.ಎನ್. ನಾಗರಾಜು, ಚಿಕ್ಕಮಗಳೂರು.
೫. ಜಿ. ಗಂಗಾಂಬಿಕಾ W/o ಸೋಮಶೇಖರಯ್ಯ, ಬೆಂಗಳೂರು.
೬. ಹೆಚ್.ಎಂ. ಸಿದ್ಧಪ್ಪ, ಬೆಂಗಳೂರು.

**ಪೋಷಕರು : (ಐದು ಸಾವಿರ ರೂ.ಗಳು)**

೧. ಎಸ್. ರೇಣುಕಯ್ಯ, ನಾಗೇನಹಳ್ಳಿ.
೨. ಹೆಚ್.ಕೆ. ರೇವತಿ, ಹೊಸಪೇಟೆ.
೩. ಆರ್. ಶಿವಣ್ಣ ಕೆ. ಸಿದ್ಧಗಂಗಮ್ಮ, ಬೆಂಗಳೂರು.
೪. ಉಮಾಶಂಕರ್, ಬೆಂಗಳೂರು.
೫. ಲಕ್ಷ್ಮೀದೇವಮ್ಮ W/o ಶಂಕರಪ್ಪ, ಹೇರೂರು, ತುಮಕೂರು ಜಿಲ್ಲೆ





ನುಡಿನಮನ

# ಸಿದ್ಧಗಂಗೆಯ ಸಿದ್ಧಪುರುಷ

– ಬಿ.ವಿ. ಮಲ್ಲಾಪುರ*

ದರ್ಶನ ಮಾತ್ರದಿಂದ ಸದುಹೃದಯದ ಸದ್ಭಕ್ತರ ಅಂತರಂಗದಲ್ಲಿ ಭಕ್ತಿಯ ತರಂಗಗಳನ್ನು ಉದ್ಬುದ್ಧಗೊಳಿಸಬಲ್ಲ ನಿಬ್ಬೆರಗಿನ ಮಹಾಮೂರ್ತಿ ಸಿದ್ಧಗಂಗೆಯ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂಬುದಕ್ಕೆ ನನ್ನ ಅನುಭವದ ಹಿನ್ನೆಲೆಯಲ್ಲಿ ಕಂಡುಕೊಂಡು ಸತ್ಯ.

ಅವರ ಮಾನವೀಯತೆ, ವೀರವಿರಕ್ತಿ, ಜಾತ್ಯಾತೀತ ಮನೋಭಾವನೆ ವೈಚಾರಿಕತೆ, ಮುಖ್ಯವಾಗಿ ಜಾತಿ-ಮತ-ಪಂಥಗಳ ಭೇದವಿಲ್ಲದೆ ಸಹಸ್ರಾರು ಬಡ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಸುವ್ಯಸ್ಥಿತ ಪವಾಡಸದೃಶ ಮಹಾಪ್ರಸಾದ ನಿಲಯ ಮತ್ತು ತ್ರಿವಿಧ ದಾಸೋಹದ ಬಗ್ಗೆ ಓದಿ ಕೇಳಿ ತಿಳಿದಿದ್ದೆ. ಆದರೆ ಅವರ ಪುಣ್ಯದರ್ಶನ ಮಾತ್ರ ಏನಕೇನ ಕಾರಣಗಳಿಂದ ಸಾಧ್ಯವಾಗಿರಲಿಲ್ಲವಾದರೂ, ಪೂಜ್ಯರನ್ನು ಕಾಣುವ ಬಯಕೆ ಮಾತ್ರ ಬತ್ತಿರಲಿಲ್ಲ.

"ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು. ಬಯಕೆ ಬರುವುದರ ಕಣ್ ಸನ್ನೆ ಕಾಣೊ" ಎಂಬ ಅನುಭಾವ ಕವಿಯೊಬ್ಬನ ಮಾತಿನಲ್ಲಿರುವ ಸತ್ಯದ ಸಾಕ್ಷಾತ್ಕಾರ ನನಗಾದುದು ನಿಜಕ್ಕೂ ಒಂದು ಯೋಗಾಯೋಗ.

ನನ್ನ ಅಳಿಯಂದಿರಾದ ಶ್ರೀ ಎಚ್.ಎಂ. ಭಾರತೇಶ ಅವರು ಪಾವಗಡದಲ್ಲಿ ನ್ಯಾಯಾಧೀಶರಾಗಿದ್ದರು. ಅಲ್ಲಿ ಯಾವುದೋ ಒಂದು ಸಂತೋಷದ ಸಂದರ್ಭದಲ್ಲಿ ಬಂಧು-ಬಳಗದವರೆಲ್ಲ ಸೇರಿದ್ದೆವು. ಆಗ ಸುಪ್ರಸಿದ್ಧ ಪುಣ್ಯಕ್ಷೇತ್ರವಾದ ಸಿದ್ಧಗಂಗೆಯ ಮಠ ಮತ್ತು ಅದರ ಕರ್ಣಧಾರತ್ವವನ್ನು ವಹಿಸಿದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದರ್ಶನ ಪಡೆಯುವ ಕಾರ್ಯಕ್ರಮ ಹಾಕಿಕೊಂಡೆವು.

ನಾವೆಲ್ಲ ಸಿದ್ಧಗಂಗಾ ಮಠಕ್ಕೆ ಹೋದಾಗ ಪೂಜ್ಯಶ್ರೀಗಳು ಮಠದಲ್ಲಿರಲಿಲ್ಲ. ಅಲ್ಲಿಯೇ ಸಮೀಪದಲ್ಲಿದ್ದ ಶ್ರೀಮಠದ ಜಮೀನಿನಲ್ಲಿ ದೈಹಿಕ ಶ್ರಮಯುಕ್ತ ಕಾರ್ಯಕ್ರಮದಲ್ಲಿ ತೊಡಗಿದ್ದ ವಿಷಯ ನಮಗೆ ತಿಳಿದಾಗ ನಾವು ಆಶ್ಚರ್ಯಚಕಿತರಾದೆವು. ನಾನು ನಿಜವಾಗಿಯೂ ದಂಗಾಗಿ ಹೋದೆ. ಅಂತಹ ದೊಡ್ಡ ಮಠದ ಅಧಿಪತಿಗಳಾದ ಶ್ರೀಗಳು, ದೈಹಿಕ ಶ್ರಮಯುಕ್ತ ಕಾಯಕದಲ್ಲಿ ನಿರತರಾಗಿರುವುದನ್ನು ನೆನೆದಾಗ, ಬಸವಾದಿ ಪ್ರಮಥರು ಪ್ರತಿಪಾದಿಸಿದ ಕಾಯಕ ಸಿದ್ಧಾಂತದಲ್ಲಿ ಪೂಜ್ಯರಿಗಿದ್ದ ಅಚಲನಿಷ್ಠೆಯ ಅರಿವು ನನಗಾಗದೆ ಹೋಗಲಿಲ್ಲ. ಇಲ್ಲಿ ಗಮನಿಸಬೇಕಾದ ಒಂದು ಮಹತ್ವದ ಅಂಶವೆಂದರೆ ಕಾಯಕದ ಬಗೆಗಿನ ತಮ್ಮ ನಿಷ್ಠೆಯನ್ನು ಇತರ ಹಲವಾರು ಸ್ವಾಮಿಗಳಂತೆ ಕೇವಲ ಉಪದೇಶದ ಮಟ್ಟಕ್ಕೇ ನಿಲ್ಲಿಸದೆ, ಆ ನಿಷ್ಠೆಯನ್ನು ಕಾರ್ಯರೂಪಕ್ಕೆ ಇಳಿಸಿದುದು. ಶ್ರೀಗಳವರ ಈ ಬಗೆಯ ಸನ್ನಡತೆ 'ನನ್ನ ಮೇಲೆ ಅಚ್ಚಳಿಯದ ಪ್ರಭಾವ ಬೀರುವ ಜೊತೆಗೆ, ಅವರ ಬಗೆಗಿನ ಭಕ್ತಿ-ಗೌರವಗಳು ನನ್ನಲ್ಲಿ ಇಮ್ಮಡಿ ಮುಮ್ಮಡಿಗೊಂಡವು. ಮಾನವ ಜನಾಂಗಕ್ಕೆ ಸರಿಯಾದ ಮಾರ್ಗದರ್ಶನ ಮಾಡಬಲ್ಲ ಬೆಳಕಿನ ಪುಂಜವೊಂದು ಶ್ರೀಮಠದಲ್ಲಿ ಜಾಜ್ವಲ್ಯಮಾನವಾಗಿರುವುದನ್ನು ನೆನೆದು ತುಂಬಾ ಖುಷಿಪಟ್ಟೆ. ನಾವು ಹಾದಿ ಕಾಯುತ್ತಿರುವುದನ್ನು ತಿಳಿದು ಶ್ರೀಮಠಕ್ಕೆ ಆಗಮಿಸಿ ಪೂಜ್ಯರು ನಮ್ಮೆಲ್ಲರಿಗೆ ದರ್ಶನವಿತ್ತು ಆಶೀರ್ವದಿಸಿದ್ದು ಒಂದು ಪುಣ್ಯ ವಿಶೇಷ. ಅಂದು ಶ್ರೀಮಠದಲ್ಲಿ ನಮಗೆ ದೊರೆತ ಅತಿಥಿ ಸತ್ಕಾರದ ಸಿಹಿ ನೆನಪು ಇನ್ನೂ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿಯೇ ಇದೆ.

ಪೂಜ್ಯರ ದರ್ಶನಭಾಗ್ಯ ಮತ್ತೆ ನನಗೆ ಒದಗಿ ಬಂದುದು, ಆಗಿನ ಧಾರವಾಡ ಜಿಲ್ಲೆ (ಈಗಿನ ಗದಗ ಜಿಲ್ಲೆ)ಯ ರೋಣ ತಾಲ್ಲೂಕಿನ ನರೇಗಲ್ ಗ್ರಾಮದಲ್ಲಿ. ಹಾಲಕೆರೆಯ ಶ್ರೀ ಅನ್ನದಾನೀಶ್ವರ ಮಠದ ಪಟ್ಟಾಧಿಕಾರಿಗಳಾದ ಪೂಜ್ಯ ಶ್ರೀ ಸಂಗನಬಸವ ಮಹಾಸ್ವಾಮಿಗಳವರು ತಾವು ಆರಂಭಿಸಿದ ಅನನ್ಯ ಬಗೆಯ ಸಂಚಾರಿ ಬಸವ ಪುರಾಣ ಪ್ರವಚನದ ಮುಕ್ತಾಯ ಸಮಾರಂಭವನ್ನು ಅಲ್ಲಿ ತುಂಬಾ ಅದ್ದೂರಿ ರೀತಿಯಲ್ಲಿ ವ್ಯವಸ್ಥೆಗೊಳಿಸಿದ್ದರು. ಬಹು ದೊಡ್ಡ ಪ್ರಮಾಣದಲ್ಲಿ

* ನಿತ್ಯೋತ್ಸವ, ೧೪ನೇ ಅಡ್ಡರಸ್ತೆ, ನವೋದಯ ನಗರ, ಧಾರವಾಡ

ಮೌಲ್ಯಗಳನ್ನು ಕೊಡುವುದರ ಮೂಲಕ ಈ ನಾಡಿನ ಸತ್ಪ್ರಜೆಗಳನ್ನಾಗಿಸಿದ್ದಾರೆ. ಒಂದು ಧರ್ಮ ಪೀಠದ ಪೀಠಾಧಿಪತಿಗಳಾಗಿ ೮೯ ವರ್ಷಗಳ ಕಾಲ ಸೇವೆ ಸಲ್ಲಿಸಿದ ಪೂಜ್ಯ ಶಿವಕುಮಾರ ಮಹಾಶಿವಯೋಗಿಗಳಿಗೆ ಸಲ್ಲುತ್ತದೆ. "ಕಾಯಕವೇ ಕೈಲಾಸ"ವೆಂಬ ಬಸವಣ್ಣನವರ ತತ್ತ್ವವನ್ನು ತಮ್ಮ ಬದುಕಿನುದ್ದಕ್ಕೂ ಆಚರಿಸುವುದರ ಮೂಲಕ ಇಂದು ನಮ್ಮಗಳ ದಾರಿದೀಪವಾಗಿದ್ದಾರೆ.

ಅವರು ತಪಸ್ಸು, ತ್ಯಾಗ, ಸೇವೆ, ಶಿವಯೋಗದಿಂದಾಗಿ ಶ್ರೀಮಠವನ್ನು ಇನ್ನೊಂದು ಸೇವಾ ಮುಖಿಯಾಗಿಸಿದ್ದಾರೆ. ಪೂಜ್ಯರು ಗ್ರಾಮೀಣ ಜನತೆ ಮೇಲೆ ಇಟ್ಟಿರುವ ಪ್ರೀತಿ, ವಾತ್ಸಲ್ಯಗಳಿಗೆ ಪೂಜ್ಯರು ಸ್ಥಾಪಿಸಿರುವ ೧೩೦ಕ್ಕೂ ಹೆಚ್ಚು ಗ್ರಾಮಾಂತರ ಶಾಲೆಗಳೇ ಸಾಕ್ಷಿಯಾಗಿವೆ.

**ಹಸಿವೆಂಬ ಹೆಬ್ಬಾವು ಬಸುರ ಬಂದು**
**ಹಿಡಿದಿಡಲು ವಿಷವೇರಿತ್ತಯ್ಯ**
**ಆಪಾರ ಮಸ್ತಕಕ್ಕೆ ಹಸಿವಿಗನ್ನವನಿಕ್ಕಿ**
**ವಿಷ ಇಳುಹ ಬಲ್ಲಡೆ ಆತನೇ ಗಾರುಡಿಗ ಕಾಣಾ**
**ರಾಮನಾಥ.**

ದೇವರ ದಾಸೀಮಯ್ಯರ ವಚನದಂತೆ ನಾಡಿನಲ್ಲಿದ್ದ ಹಸಿವು ಮತ್ತು ಅನಕ್ಷರತೆಯನ್ನು ಹೋಗಲಾಡಿಸಿದ ಗಾರುಡಿಗರಾಗಿದ್ದಾರೆ. ಅಂತಹ ಮಹಾಶಿವಯೋಗಿಗಳ ಗದ್ದುಗೆಯ ದರ್ಶನಕ್ಕೆ ಗೌರವಾನ್ವಿತ ಪ್ರಧಾನಮಂತ್ರಿಗಳು ಆಗಮಿಸಿರುವುದು ಶ್ರೀಮಠದ ಭಕ್ತಾದಿಗಳಿಗೆ ಅತೀವ ಸಂತೋಷ ಹಾಗೂ ವಿದ್ಯಾರ್ಥಿಗಳಿಗೆ ಸ್ಫೂರ್ತಿಯನ್ನುಂಟು ಮಾಡಿದೆ.

Let their message, words and work remain a beacon light to all of us and to the future generation.

I pray God almighty and our Guruji to shower blessings on Narendra Modiji to continue his valuable service to the nation.

ಇದೇ ಸಂದರ್ಭದಲ್ಲಿ ಶ್ರೀಮಠದ ಅನನ್ಯ ಭಕ್ತರಾಗಿದ್ದು ಶ್ರೀಗಳ ಆಶೀರ್ವಾದಕ್ಕೆ ಪಾತ್ರರಾಗಿದ್ದ ಈ ನಾಡಿನ ಅತ್ಯಂತ ಜನಪ್ರಿಯ ಮುಖ್ಯಮಂತ್ರಿಗಳಾಗಿ, ಹುಟ್ಟು ಹೋರಾಟಗಾರರಾಗಿ ಅನೇಕ ಏಳುಬೀಳುಗಳು ಬಂದರು ಸಹ ನಾಡನ್ನು ಸರ್ವತೋಮುಖ ಅಭಿವೃದ್ಧಿ ಪಥದಲ್ಲಿ ಕೊಂಡೊಯ್ಯಲು ಹಗಲಿರಳು ಶ್ರಮಿಸುತ್ತಿರುವುದು ಶ್ಲಾಘನೀಯ. ಅವರು ಕೂಡ ಈ ಸಭೆಯಲ್ಲಿ ಪಾಲ್ಗೊಂಡಿರುವುದು, ಹಾಗೆಯೇ ಕೇಂದ್ರದ ಸಚಿವರಾದ ಪ್ರಹ್ಲಾದ ಜೋಷಿಯವರು ಮತ್ತು ಕರ್ನಾಟಕ ಸರ್ಕಾರದ ಮಂತ್ರಿವರ್ಯರಾದ ಶ್ರೀ ವಿ. ಸೋಮಣ್ಣನವರು, ಶ್ರೀ ಮಾಧುಸ್ವಾಮಿಯವರು ಈ ಸಮಾರಂಭದ ಯಶಸ್ವಿಗೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿರುತ್ತಾರೆ. ಅವರೆಲ್ಲರಿಗೆ ಅಭಿನಂದಿಸುತ್ತಾ, ಕರ್ನಾಟಕ ಸರ್ಕಾರ, ತುಮಕೂರು ಜಿಲ್ಲಾ ಆಡಳಿತ, ಪೋಲೀಸ್ ಇಲಾಖೆ ಹಾಗೂ ಇತರೆ ಎಲ್ಲಾ ಅಧಿಕಾರಿ ವರ್ಗದವರಿಗೆ ಮತ್ತು ಪತ್ರಿಕಾ ಮಾಧ್ಯಮಕ್ಕೆ ಅಭಿನಂದಿಸುತ್ತಾ, ಪ್ರಧಾನ ಮಂತ್ರಿಗಳಿಗೆ ಶ್ರೀಮಠದ ಪರವಾಗಿ ಮತ್ತೊಮ್ಮೆ ಧನ್ಯವಾದಗಳನ್ನು ಹೇಳುತ್ತಾ ಎಲ್ಲರಿಗೂ ಶುಭವನ್ನು ಕೋರುತ್ತೇವೆ" ಎಂದರು.

ಮಾನ್ಯ ವಸತಿ ಹಾಗೂ ತೋಟಗಾರಿಕೆ ಸಚಿವರಾದ ಸನ್ಮಾನ್ಯ ಶ್ರೀ ವಿ. ಸೋಮಣ್ಣನವರು ಸರ್ವರನ್ನು ಸ್ವಾಗತಿಸಿದರು.

## ಸಿದ್ಧಗಂಗಾ ಮಾಸಪತ್ರಿಕೆ

**ಮಹಾಪೋಷಕರು : (ಹತ್ತು ಸಾವಿರ ರೂ.ಗಳು)**

೧. ವಿಜಯಕುಮಾರ್ ಡಿ.ಆರ್. ದಾವಣಗೆರೆ.
೨. ಮಲ್ಲಣ್ಣ ಎಸ್., ಮೈಸೂರು.
೩. ಶಿವಾನಂದ ಶರ್ಮ, ಬೆಂಗಳೂರು.
೪. ಕೆ.ಎನ್. ನಾಗರಾಜು, ಚಿಕ್ಕಮಗಳೂರು.
೫. ಜಿ. ಗಂಗಾಂಬಿಕಾ W/o ಸೋಮಶೇಖರಯ್ಯ, ಬೆಂಗಳೂರು.
೬. ಹೆಚ್.ಎಂ. ಸಿದ್ಧಪ್ಪ, ಬೆಂಗಳೂರು.

**ಪೋಷಕರು : (ಐದು ಸಾವಿರ ರೂ.ಗಳು)**

೧. ಎಸ್. ರೇಣುಕಯ್ಯ, ನಾಗೇನಹಳ್ಳಿ.
೨. ಹೆಚ್.ಕೆ. ರೇವತಿ, ಹೊಸಪೇಟೆ.
೩. ಆರ್. ಶಿವಣ್ಣ ಕೆ. ಸಿದ್ಧಗಂಗಮ್ಮ, ಬೆಂಗಳೂರು.
೪. ಉಮಾಶಂಕರ್, ಬೆಂಗಳೂರು.
೫. ಲಕ್ಷ್ಮೀದೇವಮ್ಮ W/o ಶಂಕರಪ್ಪ, ಹೇರೂರು, ತುಮಕೂರು ಜಿಲ್ಲೆ



## ನುಡಿನಮನ

# ಸಿದ್ಧಗಂಗೆಯ ಸಿದ್ಧಪುರುಷ

– ಬಿ.ವಿ. ಮಲ್ಲಾಪುರ*

ದರ್ಶನ ಮಾತ್ರದಿಂದ ಸದುಹೃದಯದ ಸದ್ಭಕ್ತರ ಅಂತರಂಗದಲ್ಲಿ ಭಕ್ತಿಯ ತರಂಗಗಳನ್ನು ಉದ್ಬುದ್ಧಗೊಳಿಸಬಲ್ಲ ನಿಬ್ಬೆರಗಿನ ಮಹಾಮೂರ್ತಿ ಸಿದ್ಧಗಂಗೆಯ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂಬುದಕ್ಕೆ ನನ್ನ ಅನುಭವದ ಹಿನ್ನೆಲೆಯಲ್ಲಿ ಕಂಡುಕೊಂಡು ಸತ್ಯ.

ಅವರ ಮಾನವೀಯತೆ, ವೀರವಿರಕ್ತಿ, ಜಾತ್ಯಾತೀತ ಮನೋಭಾವನೆ ವೈಚಾರಿಕತೆ, ಮುಖ್ಯವಾಗಿ ಜಾತಿ–ಮತ–ಪಂಥಗಳ ಭೇದವಿಲ್ಲದೆ ಸಹಸ್ರಾರು ಬಡ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಸುವ್ಯಸ್ಥಿತ ಪವಾಡಸದೃಶ ಮಹಾಪ್ರಸಾದ ನಿಲಯ ಮತ್ತು ತ್ರಿವಿಧ ದಾಸೋಹದ ಬಗ್ಗೆ ಓದಿ ಕೇಳಿ ತಿಳಿದಿದ್ದೆ. ಆದರೆ ಅವರ ಪುಣ್ಯದರ್ಶನ ಮಾತ್ರ ಏನಕೇನ ಕಾರಣಗಳಿಂದ ಸಾಧ್ಯವಾಗಿರಲಿಲ್ಲವಾದರೂ, ಪೂಜ್ಯರನ್ನು ಕಾಣುವ ಬಯಕೆ ಮಾತ್ರ ಬತ್ತಿರಲಿಲ್ಲ.

"ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು. ಬಯಕೆ ಬರುವುದರ ಕಣ್ ಸನ್ನೆ ಕಾಣೊ" ಎಂಬ ಅನುಭಾವ ಕವಿಯೊಬ್ಬನ ಮಾತಿನಲ್ಲಿರುವ ಸತ್ಯದ ಸಾಕ್ಷಾತ್ಕಾರ ನನಗಾದುದು ನಿಜಕ್ಕೂ ಒಂದು ಯೋಗಾಯೋಗ.

ನನ್ನ ಅಳಿಯಂದಿರಾದ ಶ್ರೀ ಎಚ್.ಎಂ. ಭಾರತೇಶ ಅವರು ಪಾವಗಡದಲ್ಲಿ ನ್ಯಾಯಾಧೀಶರಾಗಿದ್ದರು. ಅಲ್ಲಿ ಯಾವುದೋ ಒಂದು ಸಂತೋಷದ ಸಂದರ್ಭದಲ್ಲಿ ಬಂಧು–ಬಳಗದವರೆಲ್ಲ ಸೇರಿದ್ದೆವು. ಆಗ ಸುಪ್ರಸಿದ್ಧ ಪುಣ್ಯಕ್ಷೇತ್ರವಾದ ಸಿದ್ಧಗಂಗೆಯ ಮಠ ಮತ್ತು ಅದರ ಕರ್ಣಧಾರತ್ವವನ್ನು ವಹಿಸಿದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದರ್ಶನ ಪಡೆಯುವ ಕಾರ್ಯಕ್ರಮ ಹಾಕಿಕೊಂಡೆವು.

ನಾವೆಲ್ಲ ಸಿದ್ಧಗಂಗಾ ಮಠಕ್ಕೆ ಹೋದಾಗ ಪೂಜ್ಯಶ್ರೀಗಳು ಮಠದಲ್ಲಿರಲಿಲ್ಲ. ಅಲ್ಲಿಯೇ ಸಮೀಪದಲ್ಲಿದ್ದ ಶ್ರೀಮಠದ ಜಮೀನಿನಲ್ಲಿ ದೈಹಿಕ ಶ್ರಮಯುಕ್ತ ಕಾರ್ಯಕ್ರಮದಲ್ಲಿ ತೊಡಗಿದ್ದ ವಿಷಯ ನಮಗೆ ತಿಳಿದಾಗ ನಾವು ಆಶ್ಚರ್ಯಚಕಿತರಾದೆವು. ನಾನು ನಿಜವಾಗಿಯೂ ದಂಗಾಗಿ ಹೋದೆ. ಅಂತಹ ದೊಡ್ಡ ಮಠದ ಅಧಿಪತಿಗಳಾದ ಶ್ರೀಗಳು, ದೈಹಿಕ ಶ್ರಮಯುಕ್ತ ಕಾಯಕದಲ್ಲಿ ನಿರತರಾಗಿರುವುದನ್ನು ನೆನೆದಾಗ, ಬಸವಾದಿ ಪ್ರಮಥರು ಪ್ರತಿಪಾದಿಸಿದ ಕಾಯಕ ಸಿದ್ಧಾಂತದಲ್ಲಿ ಪೂಜ್ಯರಿಗಿದ್ದ ಅಚಲನಿಷ್ಠೆಯ ಅರಿವು ನನಗಾಗದೆ ಹೋಗಲಿಲ್ಲ. ಇಲ್ಲಿ ಗಮನಿಸಬೇಕಾದ ಒಂದು ಮಹತ್ವದ ಅಂಶವೆಂದರೆ ಕಾಯಕದ ಬಗೆಗಿನ ತಮ್ಮ ನಿಷ್ಠೆಯನ್ನು ಇತರ ಹಲವಾರು ಸ್ವಾಮಿಗಳಂತೆ ಕೇವಲ ಉಪದೇಶದ ಮಟ್ಟಕ್ಕೇ ನಿಲ್ಲಿಸದೆ, ಆ ನಿಷ್ಠೆಯನ್ನು ಕಾರ್ಯರೂಪಕ್ಕೆ ಇಳಿಸಿದುದು. ಶ್ರೀಗಳವರ ಈ ಬಗೆಯ ಸನ್ನಡತೆ 'ನನ್ನ ಮೇಲೆ ಅಚ್ಚಳಿಯದ ಪ್ರಭಾವ ಬೀರುವ ಜೊತೆಗೆ, ಅವರ ಬಗೆಗಿನ ಭಕ್ತಿ–ಗೌರವಗಳು ನನ್ನಲ್ಲಿ ಇಮ್ಮಡಿ ಮುಮ್ಮಡಿಗೊಂಡವು. ಮಾನವ ಜನಾಂಗಕ್ಕೆ ಸರಿಯಾದ ಮಾರ್ಗದರ್ಶನ ಮಾಡಬಲ್ಲ ಬೆಳಕಿನ ಪುಂಜವೊಂದು ಶ್ರೀಮಠದಲ್ಲಿ ಜಾಜ್ವಲ್ಯಮಾನವಾಗಿರುವುದನ್ನು ನೆನೆದು ತುಂಬಾ ಖುಷಿಪಟ್ಟೆ. ನಾವು ಹಾದಿ ಕಾಯುತ್ತಿರುವುದನ್ನು ತಿಳಿದು ಶ್ರೀಮಠಕ್ಕೆ ಆಗಮಿಸಿ ಪೂಜ್ಯರು ನಮ್ಮೆಲ್ಲರಿಗೆ ದರ್ಶನವಿತ್ತು ಆಶೀರ್ವದಿಸಿದ್ದು ಒಂದು ಪುಣ್ಯ ವಿಶೇಷ. ಅಂದು ಶ್ರೀಮಠದಲ್ಲಿ ನಮಗೆ ದೊರೆತ ಅತಿಥಿ ಸತ್ಕಾರದ ಸಿಹಿ ನೆನಪು ಇನ್ನೂ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿಯೇ ಇದೆ.

ಪೂಜ್ಯರ ದರ್ಶನಭಾಗ್ಯ ಮತ್ತೆ ನನಗೆ ಒದಗಿ ಬಂದುದು, ಆಗಿನ ಧಾರವಾಡ ಜಿಲ್ಲೆ (ಈಗಿನ ಗದಗ ಜಿಲ್ಲೆ)ಯ ರೋಣ ತಾಲ್ಲೂಕಿನ ನರೇಗಲ್ ಗ್ರಾಮದಲ್ಲಿ. ಹಾಲಕೆರೆಯ ಶ್ರೀ ಅನ್ನದಾನೀಶ್ವರ ಮಠದ ಪಟ್ಟಾಧಿಕಾರಿಗಳಾದ ಪೂಜ್ಯ ಶ್ರೀ ಸಂಗನಬಸವ ಮಹಾಸ್ವಾಮಿಗಳವರು ತಾವು ಆರಂಭಿಸಿದ ಅನನ್ಯ ಬಗೆಯ ಸಂಚಾರಿ ಬಸವ ಪುರಾಣ ಪ್ರವಚನದ ಮುಕ್ತಾಯ ಸಮಾರಂಭವನ್ನು ಅಲ್ಲಿ ತುಂಬಾ ಅದ್ದೂರಿ ರೀತಿಯಲ್ಲಿ ವ್ಯವಸ್ಥೆಗೊಳಿಸಿದ್ದರು. ಬಹು ದೊಡ್ಡ ಪ್ರಮಾಣದಲ್ಲಿ

* ನಿತ್ಯೋತ್ಸವ, ೧ಳನೇ ಅಡ್ಡರಸ್ತೆ, ನವೋದಯ ನಗರ, ಧಾರವಾಡ







ಅದು ನೆರವೇರಿತು. ವಿವಿಧ ವಿಷಯಗಳನ್ನು ಕುರಿತಂತೆ ಹಲವಾರು ವಿದ್ವಾಂಸರ ಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. ಪರಮಪೂಜ್ಯ ಶ್ರೀ ಸಿದ್ಧಗಂಗಾ ಸ್ವಾಮಿಗಳ ಸಾನ್ನಿಧ್ಯದಲ್ಲಿ ನಡೆದ ಒಂದು ಗೋಷ್ಠಿಯಲ್ಲಿ ನಾನೂ ಒಬ್ಬ ಉಪನ್ಯಾಸಕನಾಗಿದ್ದೆ. ನನ್ನ ಉಪನ್ಯಾಸದ ಮಧ್ಯೆ, ಒಂದು ಸಂದರ್ಭದಲ್ಲಿ ಕಾಯಕದ ಪ್ರಸ್ತಾಪ ಬಂದಾಗ ನಾನು "ಕಾಯಕವೆ ಕೈಲಾಸ" ಎಂಬ ಮಾತು ಬಸವಣ್ಣನವರದೆಂದು ಸಾಮಾನ್ಯವಾಗಿ ಎಲ್ಲರೂ ಹೇಳುತ್ತಾರೆ. ಆದರೆ ನನಗೆ ತಿಳಿದಂತೆ ಬಸವಣ್ಣನವರ ಯಾವುದೇ ವಚನದಲ್ಲಿ 'ಕಾಯಕವೇ ಕೈಲಾಸ' ಎಂಬ ನಿರ್ದಿಷ್ಟ ಪದ ಪ್ರಯೋಗ ಕಂಡುಬರುವುದಿಲ್ಲ. ಅದು ಬರುವುದು ಆಯ್ದಕ್ಕಿ ಮಾರಯ್ಯನ

**"ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದಡೂ<br>ಮರೆಯಬೇಕು<br>ಲಿಂಗಪೂಜೆಯಾದಡೂ ಮರೆಯಬೇಕು<br>ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು<br>ಕಾಯಕವೆ ಕೈಲಾಸವಾದ ಕಾರಣ<br>ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು".**

ಎಂಬ ವಚನದಲ್ಲಿ, ಎಂದು ಹೇಳುವ ಜೊತೆಗೆ, ಶ್ರೀ ಸಾಮಾನ್ಯರಲ್ಲಿ ಏನಕೇನ ಕಾರಣಗಳಿಂದ ಮನೆ ಮಾಡಿಕೊಂಡಿರುವ ಅಜ್ಞಾನ, ಮೂಢನಂಬಿಕೆ ಮತ್ತು ಅರ್ಥಹೀನ ಸಂಪ್ರದಾಯಗಳ ಆಚರಣೆ, ಇತ್ಯಾದಿಗಳನ್ನು ಹೋಗಲಾಡಿಸಲು ಇಂತಹ ಪುರಾಣ ಪ್ರವಚನಗಳು ಒಳ್ಳೆಯ ಅವಕಾಶವನ್ನು ಒದಗಿಸಿಕೊಡುತ್ತವೆ. ಆದುದರಿಂದ ಸ್ವಾಮಿಗಳು, ಪುರಾಣಿಕರು, ಶಾಸ್ತ್ರಿಗಳು, ಪ್ರವಚನಕಾರರು ಇಂತಹ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬ ಮಾತನ್ನೂ ಸೇರಿಸಿದೆ.

ಇಂತಹ ನನ್ನ ಮಾತಿನ ಮರೆಯಲ್ಲಿದ್ದ ವೈಚಾರಿಕತೆ ಪ್ರಾಯಃ ಪೂಜ್ಯರ ಚಿತ್ತಕ್ಕೆ ಒಪ್ಪಿತವಾದಂತೆ ತೋರುತ್ತದೆ. ಎಂತಲೇ, ಉಪನ್ಯಾಸದ ನಂತರ ನಾನು ಸ್ವಾಮಿಗಳವರ ಪಾದಕ್ಕೆ ನಮಸ್ಕರಿಸಿದಾಗ ಅವರು ತಮ್ಮ ಸಂತೋಷವನ್ನು ನನ್ನ ಬೆನ್ನು ತಟ್ಟಿ ವ್ಯಕ್ತಪಡಿಸಿದರು. ಆಗ ನನ್ನಲ್ಲಿ ಹೇಳಲಾಗದಂತಹ ಏನೋ ಒಂದು ಬಗೆಯ ಭಾವವಿಶೇಷ ಉಂಟಾದುದನ್ನು ನಾನು ಎಂದಿಗೂ ಮರೆಯಲಾರೆ. ಆಗ ಅವರ ಪಳಪಳನೆ ಹೊಳೆಯುತ್ತಿದ್ದ ಕಣ್ಣುಗಳಲ್ಲಿ ವೀರವಿರಕ್ತಿ, ಮುಖದಲ್ಲಿ ಲಾಸ್ಯವಾಡುತ್ತಿದ್ದ ಲಿಂಗನಿಷ್ಠಾರೂಪದ ತಪಶ್ಶಕ್ತಿ - ಇವೆರಡೂ ನನ್ನನ್ನು ಮಂತ್ರ ಮುಗ್ಧವಾಗಿಸಿದವು. ಪೂಜ್ಯರ ಗುಣಗ್ರಾಹಕತ್ವಕ್ಕೆ ಇದೊಂದು ಸ್ಪಷ್ಟ ನಿದರ್ಶನವೆಂದು ಹೇಳಬಹುದು.

ಪೂಜ್ಯರ ಆ ಗುಣಗ್ರಾಹಕತ್ವ, ಮುಂದೆ ಕೆಲವೇ ದಿನಗಳಲ್ಲಿ ನನಗೆ ಸಂಬಂಧಿಸಿದಂತೆ ಪ್ರಕಟಗೊಂಡುದೂ ಉಂಟು. ಅವರ ಶ್ರೀಮಠ ಯಾವುದೋ ಒಂದು ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡುವಂತೆ ನನಗೆ ಆಮಂತ್ರಣ ಬಂದಿತು. ಪ್ರಾಯಃ ಅದು ಪೂಜ್ಯ ಬುದ್ಧಿಯವರ ಸೂಚನೆಯ ಮೇರೆಗೆ ಅಲ್ಲಿಯ ಕಾರ್ಯಕರ್ತರಿಂದ ಬಂದಿರಬೇಕೆಂದು ನನ್ನ ಅನಿಸಿಕೆ.

ಪೂಜ್ಯ ಶ್ರೀಗಳ ಸಾನ್ನಿಧ್ಯದಲ್ಲಿ ನಡೆದ ಆ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ. ಸಿದ್ಧಲಿಂಗಯ್ಯನವರು ವಹಿಸಿದ್ದಂತೆ ನನ್ನ ನೆನಪು. ಉಪನ್ಯಾಸ ಕಾರ್ಯಕ್ರಮ ಮುಕ್ತಾಯವಾದ ನಂತರ ನಾನು ಪ್ರಸಾದ ಸ್ವೀಕರಿಸಿ, ಪೂಜ್ಯರ ದರ್ಶನಾಶೀರ್ವಾದ ಪಡೆಯಲು ಹೋದೆ. ಅವರೂ ಲಿಂಗಪೂಜೆ, ಲಿಂಗ ಪ್ರಸಾದಾನಂತರ ತಮ್ಮ ಕೊಠಡಿಯ ಪುಣ್ಯಾಸನದಲ್ಲಿ ಮೂರ್ತಮಾಡಿದ್ದರು. ಅವರ ತೇಜಃಪುಂಜ ಕಣ್ಣುಗಳು, ನಿರ್ಮಲ ಭಸಿತ ಶೋಭಿತ ವಿಶಾಲವಾದ ಹಣೆ, ಪುಣ್ಯವೇ ಹಣ್ಣಾದಂತಿದ್ದ ಅವರ ಕಾಷಾಯಾವೃತಕಾಯ - ಇವ ನನ್ನನ್ನು ಕೆಲವು ಕ್ಷಣ ಬೆರಗುಗೊಳಿಸಿದು ನಿಜ. ಶ್ರೀಗಳವರ ಕಾಯ, ಪ್ರಸಾದಕಾಯವಾಗಿದ್ದಂತೆ ನನಗೆ ಅನಿಸದಿರಲಿಲ್ಲ.

ಶರಣ ಸಿದ್ಧಾಂತದ ಪ್ರಕಾರ ಪರಮಾತ್ಮ ಅಥವಾ ಪರಶಿವ ಪ್ರಸಾದ ಸ್ವರೂಪನಾದರೆ, ಜೀವಾತ್ಮ ಪದಾರ್ಥ ಸ್ವರೂಪ. ಆ ಜೀವಾತ್ಮ ಪ್ರಸಾದ ಸ್ವರೂಪದ ಪರಮಾತ್ಮನಲ್ಲಿ ಬೆರೆತು ಆನಂದಿಸಬೇಕಾದರೆ ಅವನೂ ಪ್ರಸಾದ ಸ್ವರೂಪನಾಗಬೇಕಾಗುತ್ತದೆ. ಸಾಧಕ ಸೇವಿಸುವ ಪದಾರ್ಥ, ಪ್ರಸಾದವಾಗಬೇಕಾದರೆ ಅದು ಲಿಂಗಾರ್ಪಿತವಾಗಬೇಕು. ಅದಕ್ಕಾಗಿಯೇ ಶರಣರು ಅರ್ಪಣ ಕ್ರಿಯೆಯನ್ನು ಷಟ್‌ಸ್ಥಲಾಚರಣೆಯಲ್ಲಿ ಅಳವಡಿಸಿದ್ದಾರೆ. ಷಟ್‌ಸ್ಥಲಾಚರಣೆಯಲ್ಲಿ ತಮ್ಮನ್ನು ಪೂರ್ಣಪ್ರಮಾಣದಲ್ಲಿ ತೊಡಗಿಸಿಕೊಂಡಿರುವುದರಿಂದಲೇ ಅವರ ಕಾಯ ಪ್ರಸಾದಕಾಯವಾಗಿದೆ. ಅದರ ಮುಂದಣ ಪ್ರಕಾಶಕಾಯತ್ವ ತದನಂತರದ ಆಕಾಶಕಾಯತ್ವಗಳ ಸಿದ್ಧಿಯತ್ತ ಸಾಧನೆ ನಡೆಸಿರುವರೆಂದು ನನ್ನ ಅನಿಸಿಕೆ. ಹೀಗೆ ಶಿವಯೋಗ ಸಾಧನೆ ಮುಂದುವರಿಸಿರುವ ಶ್ರೀಗಳವರ 'ತ್ರಿವಿಧ ದಾಸೋಹ'ವಂತೂ ಜನಜನಿತವಾಗಿದೆ. ಇಂತಹ ಅಪ್ರತಿಮ ಚರಿತರ ಸಮೀಪದರ್ಶನ, ತದನಂತರ ಆಗದಿರುವ ಕೊರಗು ನನ್ನದು.







ಆದರೆ ಪೂಜ್ಯರು ನೆರವೇರಿಸುತ್ತಿರುವ ಅಮೂಲ್ಯ ಸಮಾಜೋ ಧಾರ್ಮಿಕ ಕಾರ್ಯಗಳನ್ನು, ಜಾತಿ-ಮತ-ಪಂಥಗಳ ಬೇಧವಿಲ್ಲದೆ ಸಹಸ್ರಾರು ಬಡ ವಿದ್ಯಾರ್ಥಿಗಳಿಗೆ ನಡೆಸಿಕೊಂಡು ಬರುತ್ತಿರುವ ಅನ್ನದಾಸೋಹವನ್ನು ಜ್ಞಾನದ ವಿವಿಧ ಶಾಖೆಗಳ ಅಧ್ಯಯನ ಅಧ್ಯಾಪನಗಳಿಗಾಗಿ ಹಲವಾರು ವಿದ್ಯಾಸಂಸ್ಥೆಗಳನ್ನು ತೆರೆಯುವ ಮೂಲಕ ಮಾಡುತ್ತಿರುವ ವಿದ್ಯಾದಾನವನ್ನು, ಶ್ರೀಮಠದಲ್ಲಿ ಧರ್ಮ-ತತ್ತ್ವ-ಸಾಹಿತ್ಯ-ಸಂಸ್ಕೃತಿಗಳನ್ನು ಕುರಿತಂತೆ ವಿಚಾರ ಸಂಕಿರಣ, ಉಪನ್ಯಾಸ, ಪ್ರವಚನಗಳ ಮೂಲಕ ನಡೆಸುತ್ತಿರುವ ಜ್ಞಾನ ದಾಸೋಹವನ್ನು ಪತ್ರಿಕೆ, ಪುಸ್ತಕ, ಸಂಸ್ಮರಣ ಗ್ರಂಥಗಳಲ್ಲಿ ಓದಿ, ಟಿ.ವಿ.ಗಳಲ್ಲಿ ನೋಡಿ ನನ್ನ ಆ ಕೊರಗನ್ನು ಕಡಿಮೆ ಮಾಡಿಕೊಂಡಿದ್ದೇನೆ. ಶ್ರೀಗಳವರ ವಿವಿಧಮುಖ ಸಮಾಜೋಧಾರ್ಮಿಕ ಕಾರ್ಯಗಳನ್ನು ಗುರುತಿಸಿದ ಕರ್ನಾಟಕ ಸರಕಾರ 'ಕರ್ನಾಟಕ ರತ್ನ', 'ಬಸವ ಪುರಸ್ಕಾರ' ರಾಷ್ಟ್ರೀಯ ಪ್ರಶಸ್ತಿ, ಕೇಂದ್ರ ಸರ್ಕಾರ ಪದ್ಮಭೂಷಣ ಪ್ರಶಸ್ತಿಯನ್ನು ನೀಡಿ ಸನ್ಮಾನಿಸಿದೆ. ಅನೇಕ ಸಂಘ ಸಂಸ್ಥೆಗಳು ಪೂಜ್ಯರಿಗೆ ನೀಡುತ್ತಿರುವ ಗೌರವ-ಪ್ರಶಸ್ತಿಗಳಿಗೆ ಲೆಕ್ಕವೇ ಇಲ್ಲ - ಇವೆಲ್ಲ ಈಗಾಗಲೇ ದಾಖಲಾಗಿರುವ ಮತ್ತು ಬಹುಜನರು ತಿಳಿದಿರುವ ವಿಷಯಗಳು.

ಹೀಗೆ ಸಮಾಜ ಅಥವಾ ಸಮಷ್ಟಿಯ ಸರ್ವತೋಮುಖ ಅಭಿವೃದ್ಧಿಗಾಗಿ ಸದಾ ಚಿಂತಿಸುತ್ತಿದ್ದ ಪೂಜ್ಯ ಶ್ರೀಗಳು, ಆತ್ಮಚಿಂತನೆಯನ್ನು ಮರೆತಿರಲಿಲ್ಲವೆಂಬುದು ಅವಶ್ಯ ಗಮನಿಸಬೇಕಾದ ಸಂಗತಿ. ಅವರ ಆತ್ಮಚಿಂತನೆಯ ಫಲವಾಗಿ ಅಂಗಗುಣಗಳಳಿದು ಲಿಂಗಗುಣಗಳು ಅಂತರಂಗದಲ್ಲಿ ಸುಳಿದೆಗೆದು ಬೆಳೆಯುತ್ತಲಿವೆ. ಅದು ಅವರ ಮುಖ, ನೇತ್ರ, ಮಾತುಗಳ ಮೂಲಕ ಅವತರಣಗೊಳ್ಳುತ್ತದೆ. ಅದನ್ನು ಕಾಣುವ ಕಣ್ಣು ಬೇಕು, ಭಾವಿಸುವ ಮನ ಬೇಕು.

ಪೂಜ್ಯರ ನೇತೃತ್ವದಲ್ಲಿ ನಡೆಯುತ್ತಿದ್ದ ಪವಾಡ ಸದೃಶ ಸಮಾಜೋಧಾರ್ಮಿಕ ಕಾರ್ಯಗಳಿಗೆ ಅವರ ಈ ಆತ್ಮಶಕ್ತಿಯೆ ಮೂಲಸ್ರೋತ್ರ. ನನಗೆ ದೊರೆತ ಅವರ ಸಮೀಪದರ್ಶನದ ಕೆಲವೇ ಕೆಲವು ಪ್ರಸಂಗಗಳಲ್ಲಿ ನಾನು ಕಂಡುಂಡ ಅವರ ಆಧ್ಯಾತ್ಮಿಕ ಸಂಪತ್ತನ್ನು ಕಟ್ಟಿಕೊಡುವ ಒಂದು ಪ್ರಯತ್ನ ಪ್ರಸ್ತುತ ಲೇಖನ.

## ಅಭಿನಂದನೆ

### ಕಲಬುರ್ಗಿಯಲ್ಲಿ ನಡೆಯುವ ೮೫ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಪ್ರಸಿದ್ಧ ಕವಿ ಡಾ. ಎಚ್.ಎಸ್. ವೆಂಕಟೇಶಮೂರ್ತಿ ಅವರು ಆಯ್ಕೆ



ಫೆಬ್ರವರಿ ೫ ರಿಂದ ೭ ರವರೆಗೆ ಕಲಬುರ್ಗಿಯಲ್ಲಿ ನಡೆಯುವ ಅಖಿಲ ಭಾರತ ೮೫ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಹಿರಿಯ ಪ್ರಸಿದ್ಧ ಭಾವಗೀತೆ ಕವಿ ಡಾ. ಎಚ್.ಎಸ್. ವೆಂಕಟೇಶಮೂರ್ತಿ ಅವರು ಆಯ್ಕೆಯಾಗಿರುವುದಕ್ಕೆ ಸಿದ್ಧಗಂಗಾ ಅಭಿನಂದನೆಗಳನ್ನು ಸಲ್ಲಿಸುತ್ತದೆ ಹಾಗೂ ಶುಭಾಶಯಗಳನ್ನು ಕೋರುತ್ತದೆ.

ಜೂನ್ ೨೩, ೧೯೪೪ ರಲ್ಲಿ ದಾವಣಗೆರೆ ಜಿಲ್ಲೆಯ ಹೋದಿಗೆರೆಯಲ್ಲಿ ಜನಿಸಿ, ಕಡು ಬಡತನದಲ್ಲಿಯೇ ಓದಿ ಡಿಪ್ಲೋಮ ಪಡೆದ ಶ್ರೀಯುತರು ಮಲ್ಲಾಡಿಹಳ್ಳಿಯ ಶಾಲೆಯಲ್ಲಿ ಶಿಕ್ಷಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಖಾಸಗಿಯಾಗಿ ಬಿ.ಎ. ಪದವಿಯನ್ನು ಪಡೆದು, ಬೆಂಗಳೂರಿಗೆ ಬಂದು ಕನ್ನಡದಲ್ಲಿ ಸ್ನಾತಕೋತ್ತರ ಪದವಿಯನ್ನು ಪ್ರಥಮ ದರ್ಜೆಯಲ್ಲಿ ಪಡೆದು, ಸೆಂಟ್ ಜೋಸೆಫ್ ವಾಣಿಜ್ಯ ಕಾಲೇಜಿನಲ್ಲಿ ಉಪನ್ಯಾಸಕಾರರಾಗಿ, ಪ್ರಾಧ್ಯಾಪಕರಾಗಿ ೨೭ ವರ್ಷಗಳ ಕಾಲ ಸೇವೆ ಸಲ್ಲಿಸಿ ೨೦೦೦ ರಲ್ಲಿ ನಿವೃತ್ತಿ ಹೊಂದಿದರು.

**ಸಾಹಿತ್ಯ ಕ್ಷೇತ್ರ** : ಇಪ್ಪತ್ತೇಳು ಕವನ ಸಂಕಲನಗಳನ್ನು ಶಂಖದೊಳಗಿನ ಮೌನ, ಉತ್ತರಾಯಣ ಮತ್ತು ಕನ್ನಡಿಯ ಸೂರ್ಯ, ವೈದೇಹಿ, ಸುನೀತಭಾವ ಮೊದಲಾದ ಕೃತಿಗಳನ್ನು ಹೊರತಂದಿದ್ದಾರೆ. ಮಕ್ಕಳಿಗಾಗಿ ಬಾಲ ಸಾಹಿತ್ಯವನ್ನು ಪ್ರಕಟಿಸಿದ್ದಾರೆ. ರಾಜ್ಯ ಹಾಗೂ ರಾಷ್ಟ್ರೀಯ ಸಮ್ಮೇಳನಗಳಲ್ಲಿ, ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿ ಮೌಲಿಕ ಪ್ರಬಂಧಗಳನ್ನು ಮಂಡಿಸಿದ್ದಾರೆ.

**ಪ್ರಶಸ್ತಿಗಳು:** ಡಾ. ಎಚ್.ಎಸ್. ವೆಂಕಟೇಶಮೂರ್ತಿಯವರು ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ಕೇಂದ್ರ ಸಾಹಿತ್ಯ ಅಕಾಡೆಮಿ, ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಭಾಷಾಂತರ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

## ನುಡಿನಮನ

## ಬೃಂದಾವನದಲ್ಲಿ ಲೀನರಾದ ವಿಶ್ವಸಂತ

# ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು

– ಎಚ್.ಎಸ್. ಸಿದ್ಧಗಂಗಪ್ಪ *

ವಿಶ್ವಸಂತ, ರಾಷ್ಟ್ರಸಂತ, ಆಧ್ಯಾತ್ಮಿಕ ಚಿಂತಕ, ವಿದ್ವತ್‌ಗಣಿ, ಸಂಪ್ರದಾಯದೊಳಗೆ ಕ್ರಾಂತಿಕಿಡಿ ಹಚ್ಚಿದ ಪ್ರಗತಿಪರ ಚಿಂತಕ, ಪ್ರಜಾಪ್ರಭುತ್ವ ಮೌಲ್ಯಗಳನ್ನು ಎತ್ತಿಹಿಡಿದ ರಾಷ್ಟ್ರಭಕ್ತ, ಸರ್ವಧರ್ಮ ಸಮನ್ವಯದ ಹರಿಕಾರ, ಉಡುಪಿಯ ಪೇಜಾವರ ಮಠಾಧ್ಯಕ್ಷರಾಗಿದ್ದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಡಿಸೆಂಬರ್ ೨೯ ರಂದು ಮುಂಜಾನೆ ಬೃಂದಾವನದಲ್ಲಿ ಲೀನವಾದರು. ಅವರಿಗೆ ೮೮ ವರ್ಷವಾಗಿತ್ತು. ಪೂಜ್ಯರಿಗೆ ಸಿದ್ಧಗಂಗಾ ಅಶ್ರುತರ್ಪಣವನ್ನು ಅರ್ಪಿಸುತ್ತದೆ.

**ಜನನ-ಶಿಕ್ಷಣ :** ಏಪ್ರಿಲ್ ೨೭, ೧೯೩೧ ರಂದು ಪುತ್ತೂರು ತಾಲ್ಲೂಕಿನ ರಾಮಕುಂಜ ಎಂಬ ಗ್ರಾಮದಲ್ಲಿ ಜನಿಸಿದರು. ಹಡೆದ ಪುಣ್ಯಜೀವಿಗಳು ತಂದೆ ಎಂ. ನಾರಾಯಣಾಚಾರ್ಯ, ತಾಯಿ ಕಮಲಮ್ಮ. ತಾಯಿ ತೊಟ್ಟಿಲಲ್ಲಿ ಮಲಗಿಸಿ ತೂಗುವಾಗ ತನ್ನ ಕರುಳಕಂದ ಮುಂದೆ ಮಹಾನ್ ಸಂತನಾಗಿ ರಾಷ್ಟ್ರಕ್ಕೆ ಆಧ್ಯಾತ್ಮಿಕ ಬೆಳಕನ್ನು ನೀಡುತ್ತಾನೆಂದು ಊಹಿಸಿರಲಿಲ್ಲ ! ಹುಟ್ಟಿದ ಮಗುವಿಗೆ ಪ್ರೀತಿಯಿಂದ ವೆಂಕಟರಮಣ ಎಂಬ ಹೆಸರಿಟ್ಟರು. ಹುಟ್ಟಿದೂರಿನಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದ ಮೇಲೆ ೮ನೇ ವರ್ಷಕ್ಕೆ ಉಪನಯನದ ಪೂರ್ವ ತಂದೆ ತಾಯಿಗಳು ಉಡುಪಿಗೆ ಕರತಂದಿದ್ದರು. ಆಗ ಪೇಜಾವರಶ್ರೀ ವಿಶ್ವಮಾನ್ಯತೀರ್ಥ ಶ್ರೀಪಾದರ ಪರ್ಯಾಯ ಶುಭ ಸಂದರ್ಭವಾಗಿತ್ತು. ಶ್ರೀಪಾದರು ಶ್ರೀಕೃಷ್ಣನ ಪೂಜೆ ಮಾಡುವುದನ್ನು ತದೇಕ ಚಿತ್ತದಿಂದ ಗಮನಿಸುತ್ತಿದ್ದ ವೆಂಕಟರಮಣನನ್ನು ಗಮನಿಸಿದ ಪೂಜ್ಯರಿಗೆ, ವೆಂಕಟರಮಣ ನಮಸ್ಕರಿಸಲು ಹೋದಾಗ ಅವನ ಮುಗ್ಧ, ಸೌಮ್ಯ ಮುಖವನ್ನು ಕಂಡ ಪೂಜ್ಯರು "ನೀನು ನನ್ನಂತೆಯೇ ಸ್ವಾಮಿ ಆಗುತ್ತೀಯಾ" ಎಂದು ಕೇಳಿದಾಗ, ಸ್ವಾಮಿತ್ವದ ಬಗ್ಗೆ ತಿಳಿವಳಿಕೆಯಿಲ್ಲದ ವೆಂಕಟರಮಣ ತನ್ನ ಒಳಮನಸ್ಸಿನ ಪ್ರೇರಣೆಯಿಂದ 'ಹೂಂ' ಎಂದನಂತೆ. ಶ್ರೀಕೃಷ್ಣನ ಪ್ರೇರಣೆಯಿಂದ ಶ್ರೀ ವಿಶ್ವಮಾನ್ಯ ತೀರ್ಥ ಶ್ರೀಪಾದರು ವೆಂಕಟರಮಣನನ್ನೇ ತಮ್ಮ ಉತ್ತರಾಧಿಕಾರಿಯಾಗಿ ಸ್ವೀಕರಿಸಲು ನಿಶ್ಚಯಿಸಿ, ತಂದೆ ತಾಯಿಗಳ ಒಪ್ಪಿಗೆ ಪಡೆದು ಡಿಸೆಂಬರ್ ೩, ೧೯೩೮ ರಲ್ಲಿ ಹಂಪಿಯ ಯಂತ್ರೋದ್ಧಾರ ಮುಖ್ಯಪ್ರಾಣನ ಸನ್ನಿಧಿಯಲ್ಲಿ ಶ್ರೀ ವಿಶ್ವೇಶತೀರ್ಥರೆಂಬ ಅಭಿದಾನದಿಂದ ಸನ್ಯಾಸ ದೀಕ್ಷೆ ನೀಡಲಾಯಿತು. ಎಲ್ಲವೂ ಒಂದು ರೀತಿ ಸಿನಿ ಪಯಣದಂತೆ ನಡೆದು ಹೋಯಿತು.

ಒಂದು ಕುಗ್ರಾಮದ ಮುಗ್ಧ ಬಾಲಕ ಪೇಜಾವರ ಮಠದ ಉತ್ತರಾಧಿಕಾರಿಯಾದುದು ಯೋಗಾಯೋಗ! ತಂದೆ ತಾಯಿಗಳು ಶ್ರೀಕೃಷ್ಣನನ್ನು ಪೂಜಿಸಿದ ಪುಣ್ಯದ ಫಲ! ಅಂತಹ ಸುಪುತ್ರನನ್ನು ಪಡೆದ ಅವರು ನಿಜಕ್ಕೂ ಧನ್ಯರು. ಅವರ ಪುಣ್ಯ ಗರ್ಭದಲ್ಲಿ ಜನಿಸಿದ ವೆಂಕಟರಮಣರೂ ಧನ್ಯರು.

ಶ್ರೀ ವಿಶ್ವೇಶತೀರ್ಥರ ಸಂಸ್ಕೃತ ಆರಂಭಿಕ ಶಿಕ್ಷಣ ಉಡುಪಿ ಮಠದ ವಿದ್ವಾಂಸರ ಹತ್ತಿರ ನಡೆಯಿತು. ಇದೇ ಸಂದರ್ಭದಲ್ಲಿ ಭಂಡಾರಕೇರಿ ಮಠಾಧೀಶರಾಗಿದ್ದ ಶ್ರೀ ವಿದ್ಯಾಮಾನ್ಯತೀರ್ಥ ಶ್ರೀಪಾದರು ಉಡುಪಿಗೆ ಬಂದರು. ತಪಸ್ವಿಗಳು, ಘನವಿದ್ವಾಂಸರೂ ಆಗಿದ್ದ ಶ್ರೀ ವಿದ್ಯಾಮಾನ್ಯರನ್ನು ಬಾಲಯತಿಗಳಾಗಿದ್ದ ಶ್ರೀ ವಿಶ್ವೇಶತೀರ್ಥರು ಆಹ್ವಾನ ನೀಡಿ ಮಠಕ್ಕೆ ಕರೆಸಿಕೊಂಡು ಸತ್ಕರಿಸಿದ ರೀತಿಯನ್ನು ಕಂಡು ಪ್ರಭಾವಿತರಾದರು. ಚಿಕ್ಕ ವಯಸ್ಸಿನಲ್ಲಿಯೇ ಅವರಲ್ಲಿದ್ದ ಕ್ರಿಯಾಶೀಲತೆ ಅವರನ್ನು ಬೆರಗಾಗುವಂತೆ ಮಾಡಿತು.

ಶ್ರೀ ವಿಶ್ವೇಶತೀರ್ಥರ ಚುರುಕುತನವನ್ನು ಹತ್ತಿರದಿಂದ ಗಮನಿಸಿದ ಶ್ರೀ ವಿದ್ಯಾಮಾನ್ಯ ತೀರ್ಥರು ಮುಂದೆ ನಡೆದ ಮಧ್ವರಾದ್ಧಾಂತ ಸಂವರ್ಧಿನೀ ಸಭೆಯ ಅಧ್ಯಕ್ಷತೆಗೆ ಆಹ್ವಾನಿಸಿದರು. ರಾಜ್ಯದ ವಿವಿಧ ಕಡೆಗಳಿಂದ ಬಂದ ಹಿರಿಯ ವಿದ್ವಾಂಸರು ಸಮಾವೇಶಗೊಂಡಿದ್ದ ವಿದ್ವತ್‌ಸಭೆಯಲ್ಲಿ ಪೇಜಾವರ ಶ್ರೀ ವಿಶ್ವೇಶತೀರ್ಥರು ನೀಡಿದ ಭಾಷಣಕ್ಕೆ ಸಭೆಯೇ ತಲೆದೂಗಿತು. ಅವರಲ್ಲಿ ಮಡುಗಟ್ಟಿದ್ದ ಚಿಂತನೆ ಮಾತುಗಳ ರೂಪದಲ್ಲಿ ಆರೋಹಣವಾಯಿತು. ಶ್ರೀ ವಿಶ್ವೇಶತೀರ್ಥರು ಗ್ರಹಿಕೆಯ ಶಕ್ತಿಯನ್ನು ಕಂಡ ಶ್ರೀ ವಿದ್ಯಾಮಾನ್ಯ ತೀರ್ಥರು ತಮ್ಮಲ್ಲಿ ವ್ಯಾಸಂಗ ಮಾಡಲು ಆಶ್ರಯ ನೀಡಿದರು. ಎಂಟು ವರ್ಷಗಳ ನಿರಂತರ ಅಧ್ಯಯನ,

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೭೫೮೭೧



ಮಾಧ್ವಸಿದ್ಧಾಂತದ ಮೇರು ಕೃತಿ, ನ್ಯಾಯಸುಧಾವನ್ನು ತಲಸ್ಪರ್ಶಿ ಅಧ್ಯಯನ ಮಾಡಿ ಕರಗತ ಮಾಡಿಕೊಂಡರು. ಇಡೀ ದೇಶವೇ ಗೌರವಿಸುವ ಶಾಸ್ತ್ರವೇತ್ತರಾದರು.

ನಂಜನಗೂಡಿನಲ್ಲಿ ೧೯೫೧ರಲ್ಲಿ ಆಗಮತ್ರಯ ವಿದ್ವಾಂಸರ ಸಮ್ಮೇಳನ ನಡೆಯಿತು. ಆಗ ಶ್ರೀ ವಿಶ್ವೇಶತೀರ್ಥರಿಗೆ ೨೦ರ ಹರೆಯ. ಆ ವೇಳೆಗಾಗಲೇ ತಮ್ಮ ಅಗಾಧವಾದ ಪಾಂಡಿತ್ಯದಿಂದ ಎಲ್ಲ ವಿದ್ವಾಂಸರ ಗಮನವನ್ನು ಆಯಸ್ಕಾಂತದಂತೆ ತಮ್ಮತ್ತ ಆಕರ್ಷಿಸಿದ್ದರು. ಪಂಡಿತರ ಸರ್ವಾನುಮತ ಒಪ್ಪಿಗೆಯಿಂದ ಸಮ್ಮೇಳನದ ಅಧ್ಯಕ್ಷತೆಯ ಗೌರವವನ್ನು ನೀಡಲಾಯಿತು. ಸಭೆಯಲ್ಲಿ ಉಪಸ್ಥಿತರಿದ್ದ ಮೈಸೂರು ಮಹಾರಾಜರಾಗಿದ್ದ ಶ್ರೀ ಜಯಚಾಮ ರಾಜೇಂದ್ರ ಒಡೆಯರು ತರುಣ ಯತಿಯ ಪಾಂಡಿತ್ಯಕ್ಕೆ ಬೆರಗಾಗಿ, ಪ್ರಭಾವರಾಗಿ, ಅರಮನೆಗೆ ಕರೆಸಿ ಪೂಜೆ ಮಾಡಿಸಿ ಗೌರವಿಸಿದರು.

### ಮೊದಲ ಪೀಠಾವರೋಹಣ :

ಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ತಮ್ಮ ೨೧ನೇ ವಯಸ್ಸಿನಲ್ಲಿ ಜನವರಿ ೧೮, ೧೯೫೨ ರಂದು ಮೊದಲ ಪೀಠಾರೋಹಣ ಮಾಡುವುದರ ಮೂಲಕ ಶ್ರೀಮಠದ ಇತಿಹಾಸದಲ್ಲಿ ದಾಖಲೆ ಬರೆದರು. ಅಲ್ಲಿಂದಾಚೆ ಅವರು ಕೈಗೊಂಡ ಪ್ರತಿಯೊಂದು ಪರ್ಯಾದಲ್ಲೂ ರಚನಾತ್ಮಕ ಯೋಜನೆಗಳನ್ನು ಹಮ್ಮಿಕೊಂಡು ಸಾಕಾರಗೊಳಿಸಿ ಮಠಗಳ ಇತಿಹಾಸದಲ್ಲಿ ಮನ್ವಂತರಕ್ಕೆ ನಾಂದಿ ಹಾಡಿದರು.

### ಪಂಚಪರ್ಯಾಯಗಳ ದಾಖಲೆ ನಿರ್ಮಿಸಿದ ಸಂತ

ಉಡುಪಿಯ ಅಷ್ಟಮಠಗಳ ಯತಿಗಳಲ್ಲಿ ಪರ್ಯಾಯಗಳ ಸಂಖ್ಯೆಯಲ್ಲಿ ದಾಖಲೆ ಮಾಡಿದವರು ಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರು. ಇವರು ಐದು ಬಾರಿ ಪರ್ಯಾಯ ಪೀಠವೇರಿ ಶ್ರೀಕೃಷ್ಣನ ಪೂಜೆ ಮಾಡಿದ್ದಾರೆ. ಈ ಹಿಂದೆ ಶ್ರೀ ವಾದಿರಾಜರು ಮಾತ್ರ ೩ ಬಾರಿ ಪರ್ಯಾಯ ಪೀಠವೇರಿದ್ದು, ಶ್ರೀ ವಿಶ್ವೇಶತೀರ್ಥರು ಅದನ್ನು ಸರಿಗಟ್ಟಿದ್ದಾರೆ. ಅವರ ಮೊದಲ ಪರ್ಯಾಯ ೧೯೫೨-೫೪ರಲ್ಲಿ, ಎರಡನೇ ಪರ್ಯಾಯ ೧೯೬೮-೭೦, ಮೂರನೇ ಪರ್ಯಾಯ ೧೯೮೪-೮೬, ನಾಲ್ಕನೇ ಪರ್ಯಾಯ ೨೦೦೨-೦೨ ಹಾಗೂ ಐದನೇ ಪರ್ಯಾಯ ೨೦೧೬-೧೮ ರಲ್ಲಿ ನಡೆದಿದ್ದವು.

### ಅಸ್ಪೃಶ್ಯರ ಪರ ದನಿ ಎತ್ತಿದ್ದ ಮಹಾಮಾನವತಾವಾದಿ

ಪೂಜ್ಯರ ಬಾಲ್ಯದಲ್ಲಿ ನಡೆದ ಒಂದು ಘಟನೆ ಅಸ್ಪೃಶ್ಯತೆಯ ವಿರುದ್ಧ ಹೋರಾಡುವಂತೆ ಮಾಡಿತು. ದೇವಾಲಯಗಳಲ್ಲಿ ದಲಿತರಿಗೆ ಪ್ರವೇಶ ದೊರೆಯಬೇಕೆಂಬ ತುಡಿತ ಅವರಲ್ಲಿ ಸದಾ ಕಾಡುತ್ತಿತ್ತು. ವಿಶ್ವ ಹಿಂದೂ ಪರಿಷತ್ ಸಮಾವೇಶಗಳಲ್ಲಿಯೂ ಈ ಬಗ್ಗೆ ವ್ಯಾಪಕವಾದ ಚರ್ಚೆ ನಡೆಯಿತು. ಸ್ವಾಮೀಜಿಯವರನ್ನು ಒಗ್ಗೂಡಿಸಿ ಅಸ್ಪೃಶ್ಯತಾ ನಿವಾರಣಾ ನಿಲುವಳಿಯನ್ನು ಸ್ವೀಕರಿಸಲಾಯಿತು. ಬಳಿಕ ಮೊದಲ ಬಾರಿಗೆ ಬೆಂಗಳೂರಿನ ಜಬ್ಬಾರ ದಲಿತ ಕಾಲೋನಿಗೆ ಪ್ರವೇಶ ಮಾಡಿದರು. ಅವರು ಕೈಗೊಂಡ ಈ ಕ್ರಾಂತಿಕಾರಿ ನಿಲುವನ್ನು ಕೆಲವು ಧಾರ್ಮಿಕ ಮುಖಂಡರು ವಿರೋಧಿಸಿದರು. ಕಾಲೋನಿಗೆ ಪ್ರವೇಶಿಸುವಾಗ ಭಾರಿ ಸ್ವಾಗತ ದೊರೆಯಿತಾದರೂ, ಹಿಂದಿರುಗಿ ಬರುವಾಗ ಭಾರಿ ವಿರೋಧವೂ ವ್ಯಕ್ತವಾಯಿತು. ಇದಾದ ಒಂದು ವರ್ಷದ ಒಳಗೆ ವಿರೋಧಿಸಿದವರೂ ಪೂಜ್ಯರ ಪ್ರಖರವಾದ ಚಿಂತನೆಗಳಿಗೆ ತಲೆಬಾಗಿ ಪರಿವರ್ತನೆಗೊಂಡರು. ೧೯೬೯ ರಲ್ಲಿ ಕೊಪ್ಪಳ ನಗರದ ಚಂದಪ್ಪ ಹರಿಜನ ಎಂಬುವರ ಮನೆಯಲ್ಲಿ ಸತ್ಯನಾರಾಯಣ ಪೂಜೆಯನ್ನು ಸ್ವತಃ ತಾವೇ ನೆರವೇರಿಸಿದ್ದರು. ಸಂಪ್ರದಾಯಗಳಿಗೆ ತಲೆಕೆಡಿಸಿಕೊಳ್ಳದೆ ಪೂಜೆ ನೆರವೇರಿಸಿ, ಸಂಪ್ರದಾಯಿಗಳ ಕೆಂಗಣ್ಣಿಗೆ ಗುರಿಯಾಗಿದ್ದರು.

### ಸಾಮರಸ್ಯದ ಸೇತುವೆ ಕಟ್ಟಿದವರು

ಪೂಜ್ಯ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿಯವರು ೧೯೫೪ರಲ್ಲಿ ಮೊದಲ ಬಾರಿಗೆ ಹುಬ್ಬಳ್ಳಿಯ ಸಮೀಪದ ನವಲಗುಂದಕ್ಕೆ ಹೋಗುವುದರ ಮೂಲಕ ಸಂಚಾರವನ್ನು ಪ್ರಾರಂಭಿಸಿದರು. ಅಲ್ಲಿ ವೀರಶೈವ ಮಠಾಧೀಶರು ಆಹ್ವಾನ ನೀಡಿದಾಗ, ಅಲ್ಲಿಗೆ ಹೋಗಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿದರು. ಬ್ರಾಹ್ಮಣ ಮಠಾಧೀಶರೊಬ್ಬರು ವೀರಶೈವ ಮಠಾಧೀಶರ ಜೊತೆಯಲ್ಲಿ ಒಂದೇ ವೇದಿಕೆಯನ್ನು ಹಂಚಿಕೊಂಡಿದ್ದು ಅದೇ ಮೊದಲಾಗಿತ್ತು. ಮುಂದೆ ಹೀಗೆಯೇ ಎಲ್ಲ ಸಂಪ್ರದಾಯ ಜಾತಿಗಳ ಮಠಾಧೀಶರ ಜೊತೆಗೆ ಭಾಗವಹಿಸಿದ ಪೂಜ್ಯ ಶ್ರೀಗಳು ಸಾಮರಸ್ಯದ ಹೊಸ ಅಧ್ಯಾಯವನ್ನು ತೆರೆದಿಟ್ಟರು.

### ಸಾಮಾಜಿಕ ಕಳಕಳಿ

ಪ್ರಕೃತಿಯ ವೈಪರೀತ್ಯದಿಂದ ಸಮಾಜದಲ್ಲಿ ಅವಘಡಗಳು ಉಂಟಾದಾಗ, ಸಮಾಜದ ಬಗ್ಗೆ ಅಪಾರ ಕಳಕಳಿಯನ್ನು ಹೊಂದಿದ್ದ ಶ್ರೀಗಳು ಕೂಡಲೇ ನೆರವಿಗೆ ಧಾವಿಸುತ್ತಿದ್ದರು. ಭೂಕಂಪ, ಅತಿವೃಷ್ಟಿ, ಮತ್ತಿತರ ಸಂದರ್ಭಗಳಲ್ಲಿ ಅಸಹಾಯಕರಿಗೆ ಮುಕ್ತ ಮನಸ್ಸಿನಿಂದ ನೆರವು ನೀಡಲು ಶ್ರಮಿಸಿದರು. ಗಂಜಿ ಕೇಂದ್ರಗಳನ್ನು

ತೆರೆದರು. ಪಾದಯಾತ್ರೆ ಮಾಡಿ ಆರ್ಥಿಕ ಸಹಾಯವನ್ನು ನೀಡಿದರು. ಅವರು ಕಷ್ಟಗಳಿಗೆ ಸ್ಪಂದಿಸುವ, ಕಳಕಳಿಯ ಭಾವನಾತ್ಮಕ ವ್ಯಕ್ತಿತ್ವ ಅವರದಾಗಿತ್ತು.

**ಪ್ರಜಾಪ್ರಭುತ್ವ ಮೌಲ್ಯಗಳನ್ನು ಎತ್ತಿ ಹಿಡಿದ ಶ್ರೀಗಳು**

ಪ್ರಜಾಪ್ರಭುತ್ವದ ಮೂಲ ಆಶಯಗಳಿಗೆ ಧಕ್ಕೆ ಉಂಟಾದ ಸಂದರ್ಭಗಳಲ್ಲಿ ಒಬ್ಬ ಪ್ರಜ್ಞಾವಂತ ನಾಗರಿಕರಾಗಿ ಪ್ರತಿಭಟಿಸಿದ್ದರು. ಅಂತಹ ಸಂದರ್ಭಗಳಲ್ಲಿ ಹೋರಾಟದ ಮುಂಚೂಣಿಯಲ್ಲಿದ್ದರು. ೧೯೭೫ ರಲ್ಲಿ ತುರ್ತು ಪರಿಸ್ಥಿತಿಯ ಕರಾಳ ಸಂದರ್ಭದಲ್ಲಿ ಆಗಿನ ಪ್ರಧಾನ ಮಂತ್ರಿಯಾಗಿದ್ದ ಶ್ರೀಮತಿ ಇಂದಿರಾ ಗಾಂಧಿಗೆ ಪತ್ರ ಬರೆಯುವದರ ಮೂಲಕ ಪ್ರಜಾಸತ್ತಾತ್ಮಕ ವ್ಯವಸ್ಥೆಯೆಡೆಗಿನ ಅವರ ನಿಲುವು ಸಂಪೂರ್ಣವಾಗಿ ತೆರೆದಿಡುತ್ತದೆ. ಪೂಜ್ಯ ಶ್ರೀಗಳವರು ಬರೆದ ಪತ್ರದ ಸಾರ ಹೀಗಿದೆ :

"ದೇಶದಲ್ಲಿ ಪ್ರಜಾಪ್ರಭುತ್ವ ಸುರಕ್ಷಿತವಾಗಿದೆಯೆಂದು ನೀವು ಪದೇ ಪದೇ ಸಾರುತ್ತಿದ್ದೀರಿ. ಈ ಹೇಳಿಕೆಗೆ ಜನ ನಗಬೇಕೋ ಅಳಬೇಕೋ ಎಂದು ತಿಳಿಯದೆ ದಿಗ್ಭ್ರಾಂತರಾಗಿದ್ದಾರೆ. ಪತ್ರಿಕೆಗಳಿಗೆ ಪೂರ್ತಿ ಬಾಯಿ ಕಟ್ಟಿದೆ. ಸಂಸತ್ತಿನ ನಡಾವಳಿಗಳು ಸಮಗ್ರ ವರದಿ ಜನತೆಗೆ ಅಲಭ್ಯವಾಗಿದೆ. ಸರ್ಕಾರದ ಧೋರಣೆಯನ್ನು ಟೀಕಿಸುವ ಸ್ವಾತಂತ್ರ್ಯ ಯಾರಿಗೂ ಇಲ್ಲ. ಪ್ರಜಾಪ್ರಭುತ್ವದ ವಿಡಂಬನೆಗೆ ಇನ್ನಾದರೂ ತೆರೆಯೆಳೆಯಿರಿ. ನೀವು ಚಲಾಯಿಸುತ್ತಿರುವ ಸ್ವಾತಂತ್ರ್ಯ ಎಲ್ಲರಿಗೂ ಸಿಗಲಿ. ಸರ್ಕಾರವನ್ನು ಟೀಕಿಸುವ ಸಂವಿಧಾನದ ಹಕ್ಕನ್ನು ಕಿತ್ತಿಕೊಳ್ಳುವುದರಿಂದ ಹಿಂಸಾತ್ಮಕ ಕ್ರಮಗಳಿಗೆ ದಾರಿ ಮಾಡಿಕೊಟ್ಟಂತಾಗುತ್ತದೆ. ಸೇಡು ತೀರಿಸಿಕೊಳ್ಳಲು ಜನರನ್ನು ಕೆರಳಿಸಿದಂತಾಗುತ್ತದೆ. ನಮ್ಮ ನೆರೆರಾಷ್ಟ್ರದ ದುರ್ಘಟನೆಗಳು ನಮ್ಮ ಕಣ್ಣಮುಂದಿದೆ. ಮಹಾತ್ಮಗಾಂಧಿ, ನೆಹರು ಮೊದಲಾದ ರಾಷ್ಟ್ರ ನಾಯಕರ ಅಪಾರ ಪರಿಶ್ರಮದಿಂದ ನೆಲೆಗೊಂಡ ಪ್ರಜಾಪ್ರಭುತ್ವವನ್ನು ರಕ್ಷಿಸಿಕೊಳ್ಳಲು ಜನ ಚಳವಳಿಯನ್ನಾರಂಭಿಸಬೇಕೇ? ಲಕ್ಷಾಂತರ ಮಂದಿಯ ಬಲಿದಾನವಾಗಬೇಕೇ? ಈ ಪತ್ರ ನಿಮ್ಮಲ್ಲಿ ಅಸೀಮ ಕ್ರೋಧವನ್ನುಕ್ಕಿಸೀತೆಂಬ ಅರಿವು ನನಗಿದೆ. ನಾನು ಸನ್ಯಾಸಿ, ಪಕ್ಷಪಾತವಿಲ್ಲದವನು. ನಿಮ್ಮ ಬಗ್ಗೆ, ದೇಶದ ಬಗ್ಗೆ ನನಗೆ ಅಭಿಮಾನವಿದೆ. ನಿಮ್ಮ ಕಿವಿಗೆ ಕಟುವೆನಿಸಿದರೂ ಕರ್ತವ್ಯ ಬುದ್ಧಿಯಿಂದ ಈ ಮಾತುಗಳನ್ನಾಡುತ್ತಿದ್ದೇವೆ. ಭಗವಂತ ನಿಮ್ಮನ್ನು ಅನುಸರಿಸಲಿ, ಉಚಿತವಾದ ಮಾರ್ಗತೋರಲಿ" ಎಂದು ಬರೆದಿದ್ದರು. ಅವರ ಒಂದೊಂದು ನುಡಿಯಲ್ಲಿಯೂ ಸಾಮಾಜಿಕ ಕಳಕಳಿಯಿದೆ, ಪ್ರಜಾಪ್ರಭುತ್ವವನ್ನು ರಕ್ಷಿಸಬೇಕೆಂಬ ಆಶಯವಿದೆ. ಅವರು ಮಾಡುತ್ತಿದ್ದ ಪ್ರಚೋದನಕಾರಿ ಭಾಷಣಗಳಿಂದ ಜನರು

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೊಂದಿಗೆ ಆತ್ಮೀಯ ಉಭಯಕುಶೋಲಪಹರಿ

ರೊಚ್ಚಿಗೇಳಬಹುದೆಂಬ ಭಯ ಕೇಂದ್ರ ಸರ್ಕಾರಕ್ಕೆ ಕಾಡತೊಡಗಿತು. ಶ್ರೀಗಳವರನ್ನು ಬಂಧಿಸುತ್ತಾರೆಂಬ ಸುದ್ದಿ ಹರಿದಾಡತೊಡಗಿತು. ಆಗ ಪೂಜ್ಯರು **'ನಾನು ಜೈಲಿಗೆ ಹೋಗಲು ಸಿದ್ಧ. ಆದರೆ ನನಗೆ ಅಲ್ಲಿ ಪೂಜೆ ಮಾಡಲು ಅವಕಾಶ ಮಾಡಿಕೊಡಬೇಕು'** ಎಂದು ಹೇಳಿದರಂತೆ. ಆದರೆ ಸರ್ಕಾರ ಅವರನ್ನು ಬಂಧಿಸುವ ದುಸ್ಸಾಹಸಕ್ಕೆ ಕೈಹಾಕಲಿಲ್ಲ.

**ಮುಸ್ಲಿಮರಿಗೆ ಇಫ್ತಾರಕೂಟ**

ದೇಶದಲ್ಲಿರುವ ಎಲ್ಲಾ ಸಮುದಾಯಗಳು ಪ್ರಜಾಪ್ರಭುತ್ವದಡಿಯಲ್ಲಿ ಬದುಕುತ್ತಿರುವುದು ಈ ಎಲ್ಲಾ ಸಮುದಾಯಗಳ ನಡುವೆ ಸಾಮರಸ್ಯವನ್ನು ಬೆಸೆಯಲು ಶ್ರೀಗಳು ಪ್ರತಿರೋಧದ ನಡುವೆಯೂ ಕ್ರಾಂತಿಕಾರಕ ಬದಲಾವಣೆ ಮಾಡಲು ಪ್ರಯತ್ನಿಸಿದರು. ಜೂನ್ ೨೪, ೨೦೧೭ ರಂದು ಉಡುಪಿ ಶ್ರೀಕೃಷ್ಣ ಮಠದಲ್ಲಿ ಈದ್ ಉಪಹಾರವನ್ನು ಏರ್ಪಡಿಸಿದ್ದರು. ಇದು ವಿವಾದಕ್ಕೆ ಎಡೆಮಾಡಿಕೊಟ್ಟಿತು. ಆದರೆ ಶ್ರೀಗಳು ತಮ್ಮ ದೃಢ ನಿರ್ಧಾರದಿಂದ ಹಿಂದೆ ಸರಿಯಲಿಲ್ಲ. "ಮತೀಯ ಸೌಹಾರ್ದತೆಗಾಗಿ ಕಾರ್ಯಕ್ರಮ ಏರ್ಪಡಿಸಿದ್ದೆ. ಅದೇ ದಿನ ಹಲವಾರು ದೂರವಾಣಿ ಕರೆಗಳು ಬಂದು ವಿರೋಧ ವ್ಯಕ್ತವಾಯಿತು. ಆಹ್ವಾನ ಕೊಟ್ಟು ಆನಂತರ ಆಗುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಕೃಷ್ಣಮಠದಲ್ಲಿ ಅನೇಕ ಕ್ರೈಸ್ತ ವಿದ್ಯಾರ್ಥಿಗಳು ಊಟ ಮಾಡಿಕೊಂಡು ಹೋಗುತ್ತಾರೆ. ಹೀಗಾಗಿ ಈ ಕಾರ್ಯಕ್ರಮ ಆಪೇಕ್ಷಣೀಯ ಎಂದು ತಮ್ಮ ನಿಲವನ್ನು ಸಮರ್ಥಿಸಿಕೊಂಡಿದ್ದರು.

**ಅಪ್ರತಿಮ ಹೋರಾಟಗಾರರು**

ಪ್ರಜಾಪ್ರಭುತ್ವ ಮೌಲ್ಯಗಳಿಗೆ ತೊಡಕು ಉಂಟಾದ ಸಂದರ್ಭಗಳಲ್ಲಿ ಚಳವಳಿಯ ಮುಂಚೂಣಿಯಲ್ಲಿದ್ದು



ಸಂಬಂಧಪಟ್ಟವರ ಕಣ್ಣು ತೆರೆಯುವಂತೆ ಮಾಡುತ್ತಿದ್ದರು. ನ್ಯಾಯ ಸಿಗುವವರಿಗೂ ಹಿಂದೆ ಸರಿಯುತ್ತಿರಲಿಲ್ಲ. ರಾಮಜನ್ಮಭೂಮಿ ಆಂದೋಲನ, ರಾಮಸೇವಾ ರಕ್ಷಾ ಚಳವಳಿ, ತಿರುಪತಿ ಉಳಿಸಿ ಆಂದೋಲನ, ಅಸ್ಪೃಶ್ಯತಾ ನಿವಾರಣ ಆಂದೋಲನ, ಗೋಹತ್ಯಾ ನಿಷೇಧ ಆಂದೋಲನ, ಪಶ್ಚಿಮಘಟ್ಟ ಉಳಿಸಿ ಚಳವಳಿ, ನೇತ್ರಾವತಿ ತಿರುವು ವಿರೋಧಿಸಿ ಚಳವಳಿ ಮೊದಲಾದ ಚಳವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಹೋರಾಟಗಾರರಿಗೆ ನೈತಿಕ ಬೆಂಬಲ ನೀಡುತ್ತಿದ್ದರು.

ಪೂಜ್ಯ ಶ್ರೀಗಳವರು ಉಡುಪಿ ಕೃಷ್ಣಮಠದ ಸಂಪ್ರದಾಯದಂತೆ ಯಾವಾಗಲೂ ಬರೀ ಮೈಯಲ್ಲೇ ಇರುತ್ತಿದ್ದರು. ಮೈಯನ್ನು ಮುಚ್ಚಲು ಮೇಲೊಂದು ಕಾವಿ ವಸ್ತ್ರವನ್ನು ಹೊದಿಯುತ್ತಿದ್ದರು. ಆದರೆ ಆ ವಸ್ತ್ರಕ್ಕೆ ವಿಶೇಷವಾದ ಪಾವಿತ್ರ್ಯತೆ ಇತ್ತು, ಮಹತ್ವವಿತ್ತು. ಅವರು ಹೊದಿಯುತ್ತಿದ್ದದ್ದು ಬರೀ ವಸ್ತ್ರವಾಗಿರಲಿಲ್ಲ, ಅವರು ಪ್ರೀತಿಯನ್ನು, ಶಾಂತಿ, ಕರುಣೆ, ಆತ್ಮೀಯತೆ, ವಿಶ್ವಾಸವನ್ನು ಹೊದ್ದಿದ್ದರು. ಪರಧರ್ಮ ಸಹಿಷ್ಣುತೆಯನ್ನು ಹೊಂದಿದ್ದರು. ಕ್ರಿಯಾಶೀಲತೆ, ಕತೃತ್ವಶಕ್ತಿ, ಕರ್ತವ್ಯ ಪ್ರಜ್ಞೆಯನ್ನು ಹೊದ್ದಿದ್ದರು. ಅನುಕಂಪ, ದಯೆಯನ್ನು ಹೊದಿದ್ದರು. ಈ ಎಲ್ಲಾ ಆದರ್ಶ ಗುಣಗಳು ಮೊತ್ತ ಅವರು ಹೊದಿಯುತ್ತಿದ್ದ ವಸ್ತ್ರದಲ್ಲಿ ಅಡಕವಾಗಿತ್ತು. ಅದು ಅವರಿಗೆ ಸದಾ ದೈಹಿಕ ರಕ್ಷಣೆಯ ಜೊತೆಗೆ ಆತ್ಮಸ್ಥೈರ್ಯಕ್ಕೂ ರಕ್ಷಣೆಯಾಗಿತ್ತು.

**ಶ್ರೀ ಸಿದ್ಧಗಂಗಾ ಮಠದೊಂದಿಗೆ ಸಂಬಂಧ**

ಪೂಜ್ಯಶ್ರೀ ವಿಶ್ವೇಶತೀರ್ಥ ಶ್ರೀಪಾದರು ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೊಂದಿಗೆ ಅವಿನಾಭಾವ ಸಂಬಂಧವನ್ನಿಟ್ಟುಕೊಂಡಿದ್ದರು. ಭೇಟಿಯಾದಾಗಲೆಲ್ಲ ಸಂಬಂಧವನ್ನು ತೋರುತ್ತಿದ್ದರು. ಶ್ರೀಮಠದಲ್ಲಿ ಪರಸ್ಪರ ಗೌರವಾದರಗಳನ್ನು ತೋರುತ್ತಿದ್ದರು. ಶ್ರೀಮಠದಲ್ಲಿ ನಡೆದ ಪ್ರಮುಖ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್ ಪೂರ್ಣವಾದ ಆಶೀರ್ವಚನ ದಯಪಾಲಿಸಿದ್ದರು. ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರ ಪಟ್ಟಾಧಿಕಾರದ ವಜ್ರಮಹೋತ್ಸವ, ಅಮೃತ ಮಹೋತ್ಸವ, ಶತಮಾನೋತ್ಸವ ಸಮಾರಂಭಗಳಲ್ಲಿ ಭಾಗಿಯಾಗಿದ್ದರು. ಕಳೆದ ವರ್ಷ ಸ್ವಾಮೀಜಿಯವರ ಆರೋಗ್ಯವನ್ನು ವಿಚಾರಿಸಲು ಜನವರಿ ೧, ೨೦೧೯ ರಂದು ಶ್ರೀಮಠಕ್ಕೆ ಆಗಮಿಸಿ ಬೇಗ ಗುಣಮುಖವಾಗಲಿ ಎಂದು ಶುಭ ಹಾರೈಸಿದ್ದರು.

ಅವರು ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು ನುಡಿನಮನದಲ್ಲಿ "ಸಿದ್ಧಗಂಗಾ ಮಠದ ಶಿವಕುಮಾರ ಸ್ವಾಮೀಜಿಯವರು ಕಾಯಕಜೀವಿ ಹಾಗೂ ಕರ್ಮಯೋಗಿ. ಲಕ್ಷಾಂತರ ಬಡ ವಿದ್ಯಾರ್ಥಿಗಳಿಗೆ ಊಟದ ಜೊತೆಗೆ ಶಿಕ್ಷಣಕ್ಕೆ ನೆರವಾದ ಶ್ರೀಗಳ ಸಾಧನೆ ಇತರ ಮಠಗಳಿಗೆ ಸ್ಫೂರ್ತಿ ನೀಡಿದೆ. ಅವರ ಅನ್ನ ದಾಸೋಹ ಮತ್ತು ಅಕ್ಷರ ದಾಸೋಹ ಮಾದರಿಯಾಗಿದೆ.

ನನಗೂ ಶ್ರೀಗಳಿಗೂ ೨೫ ವರ್ಷಗಳ ಅಂತರವಿದೆ. ಪ್ರಾರಂಭದಲ್ಲಿ ಶ್ರೀಗಳ ಸಾಧನೆಯನ್ನು ಕೇಳಿ ನಾನೇ ಮಠಕ್ಕೆ ಮೊದಲ ಭಾರಿ ಭೇಟಿ ನೀಡಿದ್ದೆ. ಬಳಿಕ ಎರಡನೇ ಪರ್ಯಾಯದಲ್ಲಿ ವಿಶ್ವ ಹಿಂದೂ ಪರಿಷತ್‌ನ ಧರ್ಮ ಸಂಸತ್‌ಗೆ ಶ್ರೀಗಳನ್ನು ಆಹ್ವಾನಿಸಿದ್ದೆ. ಈ ಸಂದರ್ಭದಲ್ಲಿ ಉಡುಪಿಗೆ ಆಗಮಿಸಿದ್ದ ಶ್ರೀಗಳು ಎರಡು ದಿನ ವಾಸ್ತವ್ಯ ಹೂಡಿದ್ದರು. ಅಂದಿನಿಂದ ನಮ್ಮ ಬಾಂಧವ್ಯ ಬೆಳೆದಿದೆ. ಅನೇಕ ಬಾರಿ ಸಿದ್ಧಗಂಗಾ ಮಠದ ಕಾರ್ಯಕ್ರಮಗಳಿಗೆ ಶ್ರೀಗಳ ಆಹ್ವಾನದ ಮೇರೆಗೆ ತೆರಳಿದ್ದು, ಅವರ ಸಾಧನೆಯನ್ನು ಕಣ್ಣಾರೆ ಕಂಡಿದ್ದೇನೆ ಅದೊಂದು ಅದ್ಭುತ. ಜಾತಿ-ಮತ ಭೇದವಿಲ್ಲದೆ ನಿತ್ಯ ನಡೆಯುವ ಅನ್ನದಾಸೋಹ ಪವಾಡವೇ ಸರಿ. ಹಿಂದೂ ಸಮಾಜದ ಉನ್ನತಿ, ಸಂಘಟನೆಗೆ ಶ್ರೀಗಳು ನಿರಂತರ ಮಾರ್ಗದರ್ಶನ, ಬೆಂಬಲ ನೀಡುತ್ತಿದ್ದರು. ೧೧೧ ವರ್ಷ ಶ್ರೀಗಳು ಬದುಕಿದ್ದರು. ಇನ್ನೂ ನಮ್ಮ ಮುಂದೆ ಇರಬೇಕು ಎಂದು ಜನತೆ ಬಯಸುತ್ತಿರುವುದು ಅವರ ಸಾಧನೆಗೆ ಸಾಕ್ಷಿಯಾಗಿದೆ." ಪೂಜ್ಯ ಶ್ರೀ ವಿಶ್ವೇಶತೀರ್ಥ ಶ್ರೀಪಾದರ ಒಂದೊಂದು ನುಡಿಗಳೂ ಅವರ ಹೃದಯವೈಶಾಲ್ಯತೆಗೆ, ಪರಸ್ಪರ ಪ್ರೀತಿ, ಗೌರವಗಳಿಗೆ ನಿದರ್ಶನವಾಗಿದೆ.

ಪೂಜ್ಯ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿಯವರು ಅನಾರೋಗ್ಯದಿಂದ ಮಣಿಪಾಲ ಆಸ್ಪತ್ರೆಯಲ್ಲಿ ದಾಖಲಾಗಿ ಚಿಕಿತ್ಸೆ ಪಡೆಯುತ್ತಿದ್ದಾಗ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಡಿಸೆಂಬರ್ ೨೭, ೨೦೧೯ ರಂದು ಭೇಟಿ ನೀಡಿ ಆರೋಗ್ಯವನ್ನು ವಿಚಾರಿಸಿ ಬೇಗ ಗುಣಮುಖರಾಗಲಿ ಎಂದು ಶುಭ ಹಾರೈಸಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಯವರು ತಮ್ಮ ನುಡಿ ಸಂತಾಪ ಸಂದೇಶದಲ್ಲಿ "ಸಿದ್ಧಗಂಗಾಶ್ರೀ ಹಾಗೂ ಪೇಜಾವರಶ್ರೀ ಸಮಾಜದ ಎರಡು ಕಣ್ಣುಗಳಾಗಿದ್ದರು. ಅವರ ನಿರ್ಗಮನದಿಂದ ಯತಿಕುಲಕ್ಕೆ ನಷ್ಟವಾಗಿದೆ. ಸಾಂಪ್ರದಾಯಿಕ ಮಠದ ಪೀಠಾಧಿಪತಿಯಾಗಿದ್ದರೂ. ಪೇಜಾವರ ಶ್ರೀಗಳ ಸಾಮಾಜಿಕ ಕಳಕಳಿ ಮೆಚ್ಚುಗೆಗೆ ಪಾತ್ರವಾಗಿದೆ.

ಪರಮಪೂಜ್ಯರ ನಿರಂಜನ ಪಟ್ಟಾಧಿಕಾರದ ಅಮೃತ ಮಹೋತ್ಸವ ಸಮಾರಂಭದಲ್ಲಿ ಲೋಕಸಭೆಯ ವಿರೋಧ ಪಕ್ಷದ ನಾಯಕರಾದ ಶ್ರೀ ಎಲ್.ಕೆ. ಅಡ್ವಾನಿ, ಆದಿಚುಂಚನಗಿರಿ ಜಗದ್ಗುರುಗಳು, ಶ್ರೀ ಸುತ್ತೂರು ಜಗದ್ಗುರುಗಳು, ಪೇಜಾವರ ಶ್ರೀಗಳಾದ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ಹಾಗೂ ಗಣ್ಯರು

ಚಾತುರ್ಮಾಸ್ಯ ಆಚರಣೆ ವೇಳೆ ಜ್ವರದಿಂದ ಬಳಲುತ್ತಿದ್ದರೂ ದಲಿತಕೇರಿಗೆ ಹೋಗಿದ್ದರು. ಅವರ ದಲಿತಕೇರಿಯ ಪಾದಯಾತ್ರೆ ಸಾಕಷ್ಟು ಚರ್ಚೆಗೆ ಗ್ರಾಸವಾಗಿದ್ದರೂ ಅದನ್ನು ಬಿಡದೆ ಎಲ್ಲ ಧರ್ಮ, ಜಾತಿಯವರನ್ನು ಆತ್ಮೀಯವಾಗಿ ಕಂಡಿದ್ದರು" ಎಂದು ಹೇಳಿರುವುದು ಶ್ರೀಪಾದರ ಘನವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿದೆ.

ಒಟ್ಟಿನಲ್ಲಿ ಪೂಜ್ಯ ಶ್ರೀಗಳ ಬದುಕು ಆದರ್ಶವಾಗಿತ್ತು. ಒಬ್ಬ ಮಹಾನ್ ಸಂತನಾದರೂ ಆಧ್ಯಾತ್ಮಿಕ ಪ್ರಪಂಚಕ್ಕೆ ಸೀಮಿತವಾಗಿರದೆ ಸಮಾಜಮುಖಿಯಾಗಿ ಜನರ ಕಷ್ಟಗಳಿಗೆ ಕೂಡಲೆ ಸ್ಪಂದಿಸಿ, ಪರಿಹಾರ ಸೂಚಿಸಿ, ಅವರಲ್ಲಿ ಭರವಸೆಯ ಬೆಳಕನ್ನು ತುಂಬಿದರು. ಆತ್ಮವಿಶ್ವಾಸವನ್ನು ತುಂಬಿದರು. ತಮ್ಮ ಕಾರ್ಯಗಳ ಮೂಲಕವೇ ಆಧ್ಯಾತ್ಮದ ತತ್ತ್ವಗಳನ್ನು ಸರಳಗೊಳಿಸಿ ಬೋಧಿಸಿದರು. ಸಾರ್ಥಕ ಬದುಕು ಹೇಗಿರಬೇಕೆಂಬುದಕ್ಕೆ ಉತ್ತಮ ನಿದರ್ಶನವಾಗಿದ್ದರು. ಒಬ್ಬ ಸಂತರಾದವರು ಸಮಾಜವನ್ನು ಹೇಗೆ ಮುನ್ನಡೆಸಿಕೊಂಡು ಹೋಗಬಲ್ಲರು, ಅಸಂಖ್ಯಾತ ಜನರಿಗೆ ಹೇಗೆ ಪ್ರೇರಣೆ, ಸ್ಫೂರ್ತಿಯಾಗಬಲ್ಲರು ಎಂಬುದಕ್ಕೆ ಪೇಜಾವರ ಶ್ರೀಗಳು ನಮ್ಮ ಮುಂದಿದ್ದರು. ಮಹಾನ್ ಸಂತರು ನಮ್ಮಿಂದ ಕಣ್ಮರೆಯಾಗಿದ್ದರೂ ಅವರು ಬಿಟ್ಟು ಹೋದ ಆದರ್ಶಗಳು, ಮಾನವೀಯ ಮೌಲ್ಯಗಳು ಸದಾ ಚಿರನೂತನವಾಗಿದೆ.

"ರಾಷ್ಟ್ರಕ್ಕೆ ಅದ್ಭುತವಾದ ಸೇವೆ ಸಲ್ಲಿಸಿ ಸಂಘಟನೆ, ಸಂಸ್ಕಾರದ ಸೇವೆ ಮಾಡಿಕೊಂಡಿದ್ದ ಶ್ರೀಗಳ ಅಗಲಿಕೆ ನೋವು ತಂದಿದೆ. ಬಹುತೇಕರಿಗೆ ರಾಮಮಂದಿರ ನಿರ್ಮಾಣಕ್ಕೆ ಅವರಿಂದಲೇ ಶಂಕುಸ್ಥಾಪನೆ ಮಾಡಿಸಬೇಕೆಂಬ ಅಪೇಕ್ಷೆಯಿತ್ತು. ಆದರೆ ಪ್ರಕೃತಿ ನಿಯಮದಂತೆ ನಮ್ಮನ್ನು ಬಿಟ್ಟು ಹೋಗಿದ್ದಾರೆ. ದೊಡ್ಡ ಸಂತರಾಗಿ ಆಧ್ಯಾತ್ಮ ಸಾಧನೆ ಮಾಡಿದ್ದಾರೆ. ಅವರ ಸಾಮಾಜಿಕ ಕಳಕಳಿ, ಸೇವಾ ಕೈಂಕರ್ಯ ನಮಗೆಲ್ಲ ಆದರ್ಶ."

– ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು

೮೦ ವರ್ಷಗಳ ಸುದೀರ್ಘಕಾಲ ಕೃಷ್ಣನ ಸೇವೆಯಲ್ಲಿ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದ ಪರಮಭಕ್ತರಾಗಿದ್ದ ಪೂಜ್ಯ ಶ್ರೀಪಾದರ ತಪೋನಿಷ್ಠೆಗೆ ತಲೆದೂಗಿದ ಶ್ರೀಕೃಷ್ಣ ಸಂತೃಪ್ತನಾಗಿ, ಇನ್ನೂ ಕಾಯಿಸುವುದು ಬೇಡ ಎಂದು ತನ್ನಲ್ಲಿಗೆ ಕರೆಸಿಕೊಂಡ. ಶ್ರೀಕೃಷ್ಣನ ಪ್ರೀತಿಯ ಆದೇಶವನ್ನು ಕಡೆಗಣಿಸಲಾಗದೆ ಅವರತ್ತ ನಡೆದ ಪೂಜ್ಯ ಶ್ರೀ ವಿಶ್ವೇಶತೀರ್ಥ ಸ್ವಾಮೀಜಿಯವರು ಅಮರತ್ವವನ್ನು ಪಡೆದ ಯೋಗಿಶ್ರೇಷ್ಠರು.



## ಸಂಶೋಧನಾ ಲೇಖನ

# ಕರ್ಮಸುಜ್ಞಾನ ಶಿವಯೋಗಿ ಶಾಸನೋಕ್ತ ಪರಮಾರಾಧ್ಯ ಸಿದ್ಧರಾಮ

– ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

ಸೊಲ್ಲಾಪುರ, ಮಾಡಾಳ ಮಾರುತಿ ದೇಗುಲದ ನಂದಿಸ್ತಂಭದ ಕ್ರಿ.ಶ.೧೨೩೮ರ ಶಾಸನದಲ್ಲಿ ಕೊನೆಯ (೧೭–೨೬) ಸಾಲುಗಳಲ್ಲಿ ಈ ಹಿಂದೆಯೇ ಪ್ರಸ್ತಾಪಿಸಿರುವಂತೆ ಶ್ರೀಮತು ಜಂಬೂದ್ವೀಪ ಶಿಖಾಮಣಿ, ದಕ್ಷಿಣ ವಾರಣಾಸಿ ಅಭಿನವ ಶ್ರೀಸೈಲ ಸ್ಥಳವೆನಿಪ್ಪ ಶ್ರೀ ಸೊನ್ನಲಿಗೆ ಪುರವರಾಧೀಸ್ವರನುಮಪ್ಪ ಕಪಿಲಸಿದ್ಧ ಮಲ್ಲಿಕಾರ್ಜುನದೇವರ ಯೋಗರಮಣೀಯ ಕ್ಷೇತ್ರದೊಳಗಣ ಆದಿಲಿಂಗ ... ಅನಂತಸಹಸ್ರ ಲಿಂಗ ..." ಎಂದಿರುವ ಸಾಲುಗಳಿಂದ ಖ್ಯಾತಿವೆತ್ತ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇಗುಲ (ಆ ದೇಗುಲಕ್ಕೆ ಚಕ್ರವರ್ತಿ ಸಿಂಘಣದೇವನು ದಾನಾದಿಗಳನ್ನು ನೀಡಿದ ವಿಷಯವೂ ಶಾಸನದಲ್ಲಿದೆ)ವೂ ದಕ್ಷಿಣ ವಾರಣಾಸಿ, ಅಭಿನವ ಶ್ರೀಶೈಲವೆನಿಸಿದ ಅಭಿವೃದ್ಧಿ ಸೊಲ್ಲಾಪುರದಲ್ಲಿದ್ದ ವಿಷಯ ಹೇಳಿದೆ; ಅದು ಯೋಗರಮಣೀಯ ಕ್ಷೇತ್ರವೂ ಆಗಿತ್ತು ಗಮನಾರ್ಹವಾಗಿ ಜಂಬೂದ್ವೀಪ ಶಿಖಾಮಣಿ ಅಂದರೆ (ಕ್ರಿ.ಶ.೧೨೦೦ರ ಅಬಲೂರು ಶಾಸನದ ರೀತ್ಯಾ ಜಂಬೂದ್ವೀಪದ ದಕ್ಷಿಣಕ್ಕೆ ಹಿಮಾಲಯವಿದೆ ಎಂದು ಹೇಳುವಲ್ಲಿ ಜಂಬೂದ್ವೀಪದ ವಿಸ್ತಾರವು ಹಿಮಾಲಯದಾಚೆಗೂ ಇದ್ದ ವಿಷಯ ತಿಳಿಸುವಲ್ಲಿ) ಅಂಥ ವಿಸ್ತಾರ ಪ್ರದೇಶಕ್ಕೆ ಸೊನ್ನಲಿಗೆ ಜಂಬೂದ್ವೀಪ ಶಿಖಾಮಣಿ ಎನಿಸಿತ್ತು. ಇಲ್ಲಿದ್ದ ಲಿಂಗವೆ ಆದಿಲಿಂಗವೆನಿಸಿತ್ತು. ಅಂದರೆ ಅದರ ವಿವರವೇನು ಎಂಬುದನ್ನು ವಿವೇಚಿಸಬೇಕು.

ಸೊನ್ನಲಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ ದೇಗುಲವು ಸಿದ್ಧ-ಪ್ರಸಿದ್ಧಿ ದೃಷ್ಟಿಯಿಂದ ನಿಸ್ಸಂದೇಹವಾಗಿ ಪ್ರಾಚೀನ ಕರ್ನಾಟಕದ ಬಹುಮುಖ್ಯ ದೇವಾಲಯವಾಗಿರಬೇಕು. ಇಂದು ಅದರ ಕಟ್ಟಡ ಕಾಣಬರುತ್ತಿಲ್ಲ. ನಗರದ ಉತ್ತರ ಕಸಬಾಪೇಟೆಯ ಸಾಮಾನ್ಯ ವಿನ್ಯಾಸದ ಮಲ್ಲಿಕಾರ್ಜುನ ಹೆಸರಿನ ಶಿವಾಲಯ ಸಿದ್ಧರಾಮ ಪೂಜಿಸುತ್ತಿದ್ದ ದೇವಾಲಯವೆಂಬ ನಂಬಿಕೆ ಇದ್ದರೂ, ಅದರ ಮೇಲೆ ೧೮೯೮ ಎಂಬ ಇಸವಿಯ ಕೆತ್ತನೆ ಕಾರಣ, ನವೀಕರಿಸಿದರೆ? ಅಥವಾ ಹೊಸದೇ? ಎಂಬ ಅನುಮಾನವಾಗುತ್ತದೆ; ಸೊಲ್ಲಾಪುರದ ಕೋಟೆಯೊಳಗೂ ಒಂದು ಹಾಳು ದೇವಾಲಯವಿದ್ದು, ಎರಡು ಶಾಸನಗಳು ದೇಗುಲಕ್ಕೆ ದತ್ತಿ ನೀಡಿದ ಬಗ್ಗೆ ಇದ್ದುದ್ದನ್ನು ದಾಖಲಿಸಿದೆ. ಈ ದೇಗುಲವೆ ಸಿದ್ಧರಾಮಪೂಜಿತ ಕಪಿಲಸಿದ್ಧ ಮಲ್ಲಿಕಾರ್ಜುನ ದೇಗುಲವೆಂದು ಸ್ಪಷ್ಟ. ಇದು ಸಿದ್ಧರಾಮ ಪುರಾಣದ ವರ್ಣನೆಯಮತೆ ಭವ್ಯವಾಗಿದ್ದು ಹಾಗೂ ಅದರ ಆಗ್ನೆಯಕ್ಕೆ ಕೆರೆ ಕಟ್ಟಲಾಯಿತು ಎಂದಿದೆ. ಸಿದ್ಧರಾಮ ಚರಿತ್ರೆಯ ರೀತ್ಯಾ, ಸಿದ್ಧರಾಮ ಜನನಪೂರ್ವದಲ್ಲಿ, ಅಲ್ಲಿ ಶಿವಾಲಯವಿರಲಿಲ್ಲ. ಸಿದ್ಧರಾಮನಿಗೆ ಶ್ರೀಶೈಲದಲ್ಲಿ ಶಿವನು ಪ್ರತ್ಯಕ್ಷನಾಗಿ ಸೊಲ್ಲಾಪುರಕ್ಕೆ ಬರುವ ಬಗ್ಗೆ ಭರವಸೆ ನೀಡಿ, 'ಮುಂದೊಂದು ಲಿಂಗಪ್ರತಿಷ್ಠೆಗೆಯ್ದನ್ನನಾನಂದದಿಂದಾ ಲಿಂಗದುತ್ತಮಾಂಗದಲಿ ನಿಲಿಸೆಂದು' ಹೇಳಿ ಸೊನ್ನಲಿಗೆಗೆ ಕಳುಹಿಸುತ್ತಾನೆ. ಉತ್ತರ ಕಸಬಾಪೇಟೆಯ ಮಲ್ಲಿಕಾರ್ಜುನ ಲಿಂಗವು ಲಿಂಗದ ಮೇಲೆ ಲಿಂಗವಿದ್ದ, ಎರಡು ಪಾಣಿವಟ್ಟವಿರುವುದಾಗಿದೆ. ಬಹುಶಃ ಕೋಟೆಯ ದೇಗುಲ ಹಾಳಾಗಲು ಅಲ್ಲಿಯ ಲಿಂಗವನ್ನು ತಂದು ಇಲ್ಲಿ ಸ್ಥಾಪಿಸಿರುವಂತಿದೆ. ಇನ್ನು ಶ್ರೀಶೈಲದಲ್ಲಿ ಶಿವನು ಹೇಳಿದ ಪ್ರಕಾರ ಒಂದು ವೃಷಭ(ಗೂಳಿ)ಯನ್ನು ತಂದು ಇಲ್ಲಿ ಸ್ಥಾಪಿಸಿರುವಂತಿದೆ. ಇನ್ನು ಶ್ರೀಶೈಲದಲ್ಲಿ ಶಿವನು ಹೇಳಿದ ಪ್ರಕಾರ ಒಂದು ವೃಷಭ(ಗೂಳಿ)ಯನ್ನು ಕರೆತಂದು ಈಶನ ಗೃಹಾಂತರದೊಳು (ಮಲ್ಲಿಕಾರ್ಜುನ ದೇಗುಲದಲ್ಲಿ) ಹೋಗಿಸಿ, ಅದರಿಂದ ಲಿಂಗಕ್ಕೆ ಸ್ಪರ್ಶ ಮಾಡಿಸಿ,

* ನಂ. ೨೨೧, "ಶ್ರೀ ಜಚನಿ ಕೃಪ" ೭ನೇ ಅಡ್ಡರಸ್ತೆ, ರಾಜಾಜಿನಗರ, ಬೆಂಗಳೂರು–೫೬೦೦೧೦





ಲಿಂಗವೊಂದನ್ನು ಸ್ಥಾಪಿಸಿ ಅದರ ಮೇಲೆ ಮಂದಾರವೃಕ್ಷದಡಿಯಲ್ಲಿ ತನ್ನ ಕೈಸೇರಿದ್ದ ಲಿಂಗವನ್ನು ಸ್ಥಾಪಿಸಿದನು. ಇದು ಯೋಗಲಿಂಗವಾಯಿತು, ಎಂದೆಲ್ಲ ವಿವೇಚಿಸಿದ್ದಾರೆ ಡಾ. ಎಂ.ಎಂ. ಕಲಬುರ್ಗಿ[೪೩].

ಈ ಹಿನ್ನೆಲೆಯಲ್ಲಿ ಗಮನಿಸಿದರೆ ಶ್ರೀಶೈಲದಲ್ಲಿ ಶಿವನಾಣತಿಯಾಗಲು (ಮಲ್ಲಿಕಾರ್ಜುನಲಿಂಗ), ಸಿದ್ದರಾಮನಿಗೆ, 'ಆದಿಲಿಂಗ' ಶ್ರೀಶೈಲ ಮಲ್ಲಿಕಾರ್ಜುನನೆ, ಸಾಂಕೇತಿಕವಾಗಿ ಸಿದ್ಧರಾಮಚಾರಿತ್ರದ ಮಾತನ್ನು ಗಮನಿಸಿದರೆ ಸೊನ್ನಲಿಗೆಯಲ್ಲಿ ಕೋಟೆ ದೇಗುಲದಲ್ಲಿ ಮೊದಲಿದ್ದ ಲಿಂಗವೇ ಆದಿಲಿಂಗವಾಗಬೇಕು. ಜೊತೆಗೆ ಶಾಸನದ ರೀತ್ಯಾ, ಶ್ರೀಕನ್ನೇಶ್ವರ ಚಟ್ಟೇಶ್ವರ ಮಲ್ಲಿಕಾರ್ಜುನ ತ್ರಿಕೂಟ ಶಿವಾಲಯಕ್ಕೆ ದತ್ತಿ ಕನ್ನಪಯನಾಯಕನಿಂದಾಗಿ ದೊರೆತದ್ದು ರಾಜದತ್ತಿ ಎನ್ನಬೇಕು. ಕೋಟೆಯಲ್ಲಿ ಆ ದೇವಾಲಯವಿದ್ದುದೂ ಸಹಜ. ಇದಲ್ಲದೆ ಶಾಸನಗಳಲ್ಲಿ ಬರುವ ಸಿದ್ಧರಾಮನ ವಚನಸೂಚಿತ ಭಾಗದಲ್ಲಿ 'ಮನದ ಕೊನೆ ಜ್ಯೋತೀಶ್ವರನುಂ ವ್ರಿಶಭನ ರೂಪಾಗಿ ... ತಾನೆಯಾಗಿ ... ಯೋಗರಮಣೀಯ ಕ್ಷೇತ್ರ ... ಅಭಿನವ ಶ್ರೀಶೈಲವನೆ ಮಾಡಿ' ಎಂದಿರುವಲ್ಲಿ ಸಿದ್ಧರಾಮ ಚರಿತ್ರೆಗೂ ಹೊಂದಿಕೊಂಡಂತೆ ಕೋಟೆ ಮಲ್ಲಿಕಾರ್ಜುನನ ದೇಗುಲವೇ ಆದಿಲಿಂಗದ ನೆಲೆಯಾಗಿ, 'ಜೋತೀಶ್ವರ'ನು ಜ್ಯೋತಿರ್ಲಿಂಗವೆನಿಸಿ, ಲಿಂಗದ ಮೇಲೆ ಲಿಂಗ ಆಗಿ, ಅಂದರೆ ಶ್ರೀಶೈಲದ ಆದಿಲಿಂಗವೆ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನಕ್ಕೆ ಆಧಾರವಾಗಿ 'ಲಿಂಗ ಮೇಲೆ ಲಿಂಗ'ವೆನಿಸುವ ಯೋಗಲಿಂಗ ಪ್ರಸ್ತಾಪವಾಗುತ್ತದೆ. ಅರ್ಥಾತ್ ಶ್ರೀಶೈಲದಿಂದ-ಆದಿಲಿಂಗನ ನೆಲೆಯಿಂದ 'ಬಂದು ಸೊನ್ನಲಿಗೆಯಲ್ಲಿ 'ಆದಿಲಿಂಗ'ವೆಂದು ಪರಿಭಾವಿಸಿ ಸ್ಥಾಪನೆ ಮಾಡಿರಬೇಕು. ಹಾಗೂ ತ್ರಿಕೂಟ ದೇಗುಲ ಎಂದೆಲ್ಲ ಹೇಳಲು ಪಾಳುಬಿದ್ದಾಗ ಅದು ನಾಶವಾಗಿ ಮೂರುಲಿಂಗಗಳಲ್ಲಿ ಮಲ್ಲಿಕಾರ್ಜುನ ಲಿಂಗ ಮಾತ್ರ ಉಳಿದಿದ್ದಂತೆ ಕಾಣುತ್ತದೆ. ಅಥವಾ ಮೂರು ಲಿಂಗಗಳಲ್ಲಿ ಎರಡು ಕೆಳಗಡೆ ಒಂದು ಮುಂದುಗಡೆ ಇರುವ ವ್ಯವಸ್ಥೆಯೂ ಆದಾಗಿದ್ದು, ಯೋಗಲಿಂಗದ ಪರಿಕಲ್ಪನೆಯೂ ಅಲ್ಲಿಟ್ಟಿರಬೇಕು. ಸಿದ್ಧರಾಮ ತನ್ನ ವಚನಗಳಲ್ಲಿ 'ತ್ರೈಲಿಂಗ'ದ ವಿಷಯವನ್ನು ಪ್ರಸ್ತಾಪ ಮಾಡಿರುವಲ್ಲಿ ತ್ರಿಕೂಟಾಚಲ ದೇಗುಲ ಅವನ ಕಾಲಕ್ಕೆ ನಿರ್ಮಿತವಾಗಿರಲೂಬಹುದು. ವಚನದಲ್ಲಿ 'ಅವ್ವೆ'ಯ ಪ್ರಸ್ತಾಪವೂ ಇದೆ. ಅಂತಾಗಿ ಸೊನ್ನಲಿಗೆ ನನ್ನಪ್ಪನ ರಾಣಿ ಚಾಮಲದೇವಿಯ ಕನಸಿನಲ್ಲಿ ಶಿವ, ಆಕೆಗೆ ಭೂಮಿಯಂ ಸಿದ್ಧರಾಮಗೆ ಕೊಡು' ಎಂದಿರುವುದೂ ವಚನದ ವಿಷಯ ಪೋಷಕಕ್ಕೆ, ಕಾರಣವಾಗುವಂತಿದೆ. ಹೀಗಾಗಿ ಸಿದ್ಧರಾಮನ ಈ (ಆದಿಲಿಂಗದ) ತ್ರಿಕೂಟ ದೇಗುಲ, ತ್ರಿಲಿಂಗದೊಡನೆ, 'ಯೋಗಲಿಂಗ'ವಾಗಿ ಪ್ರಸಿದ್ಧಿ ಪಡೆದಿರುವಂತಿದೆ. ಅದರಂತೆ ತ್ರಿಲಿಂಗ ಸ್ಥಾನಸೂಚಿತ ಶಿಲ್ಪ, ತುಮಕೂರು ತಾಲೂಕಿನ ಬಿಳುಗುಂದದ ಶ್ರೀ ಗುರು ಸಿದ್ಧರಾಮೇಶ್ವರರ ೭೫ನೇ ಮಹಾಗದ್ದುಗೆ ಕ್ಷೇತ್ರದಲ್ಲಿ, ಪವಿತ್ರ ಶ್ರೀ ರುದ್ರತೀರ್ಥ 'ಶ್ರೀತ್ರೈಲಿಂಗೇಶ್ವರ' ಲಿಂಗಗಳಿರುವುದೂ, ಪರಂಪರೆಯಿಂದ ಬಂದ ಭೌತಿಕ ಸಾಕ್ಷಿಯಾಗಿದೆ[೪೪]. (ಈ ಬಗ್ಗೆ ಮುಂದೆ ಹೆಚ್ಚಿನ ವಿವರಗಳು ಆ ಕ್ಷೇತ್ರ ಸಂಬಂಧಿಯಾಗಿ ನೀಡಿದೆ.)

ಹಂಪೆಯ ಉದ್ದಾನ ವೀರಭದ್ರನ ದೇಗುಲದ ಮುಂದಿನ ದೀಪಸ್ತಂಭದ ಮುಖದಲ್ಲಿ ಲಿಂಗದ ಮೇಲೆ ಲಿಂಗದ ಕೆತ್ತನೆ ಇದ್ದು, ಅದರ ಕೆಳಬದಿಗೆ, ಅರಳಿದ ಕಮಲದ ಉಬ್ಬುಶಿಲ್ಪವಿದೆ. 'ಯೋಗಲಿಂಗ'ದಲ್ಲಿ ಲಿಂಗಕ್ಕೆ ಲಿಂಗವೇ ಆಧಾರವಾಗಿರುವ ತಾತ್ವಿಕ ವಿವೇಚನೆ ಇದೆ; ಅನುಗುಣ ಪದ್ಧತಿಯೂ ಇದೆ. ಹೀಗಾಗಿ 'ಸಿದ್ಧರಾಮೇಶ್ವರ ಚರಿತ್ರೆ'ಯಲ್ಲಿ 'ಲಿಂಗದ ಮೇಲೆ ಲಿಂಗಮಂ ಪ್ರೇಮದಿಂದ ಪ್ರತಿಷ್ಠಿಸು; ಮೊದಲಿನ ಲಿಂಗವಿರಿಸಿ ಮೇಲಣ ಲಿಂಗವಂ ಸ್ಥಾಪಿಸುತೆ ಶ್ರೀ ಮಲ್ಲಿಕಾರ್ಜುನನೆಂಬುವ ನಾಮಂ'; 'ಶ್ರೀಮತ್ಕಪಿಲಸಿದ್ದ ಮಲ್ಲಿಕಾರ್ಜುನನೆಂಬ ಕಾಮಿತಾರ್ಥವ ನೀವ ಲಿಂಗ ಮೇಲಣ ಲಿಂಗ, ಮೊದಲಿನಾ ಮಲ್ಲಿಕಾರ್ಜುನ ಲಿಂಗವೆಂದು ಪೆಸರಾಂತು ಮೇಲಣ ಲಿಂಗವುಂ ತಾನು ಛಂದದಿಂದಂ ಕಪಿಲಸಿದ್ಧ ಮಲ್ಲೇಶನೆಂಬ ಅಭಿಧಾನಪೊಂದಿ ಜಗದಿ ದ್ವಂದ್ವನಾಮ'ಗಳಿಂದ ಮೆರೆಯುತ್ತದೆ ಎಂದಿರುವಲ್ಲಿ ಯೋಗಲಿಂಗದ ವಿನ್ಯಾಸ ತಿಳಿಯುತ್ತದೆ[೪೫].

ಪಿರಿಯಾಪಟ್ಟಣಕ್ಕೆ ಸಮೀಪದ ಮೈಸೂರು ಜಿಲ್ಲೆ, ಬೆಟ್ಟದಪುರದಲ್ಲಿಯೂ ಬೆಟ್ಟದ ಮಲ್ಲಿಕಾರ್ಜುನ ದೇಗುಲದಲ್ಲಿ 'ಯೋಗಲಿಂಗ-ಲಿಂಗದ ಮೇಲೆ ಲಿಂಗ' (ತನಗೆ ತಾನೇ ಆಧಾರವಾದ ಲಿಂಗದ) ಪರಿಕಲ್ಪನೆಯು ಶಿಲ್ಪರೂಪದಲ್ಲಿ ಕಂಡುಬರುತ್ತದೆ. ಅದು ಹಂಪೆಯ ಉದ್ದಾನ ವೀರಭದ್ರ ಗುಡಿ ಎದುರಿನ ದೀಪಸ್ತಂಭದ ಮೇಲಿನ 'ಯೋಗಲಿಂಗ' ಶಿಲ್ಪಕ್ಕಿಂತ ತುಸು ಭಿನ್ನರೂಪದಲ್ಲಿ ಕಾಣಿಸಿಕೊಂಡಿದೆ. ಒಂದೇ ಪಾಣಿವಟ್ಟ ಪೀಠದ ಮೇಲೆ ಒಂದರ ಹಿಂದೆ ಇನ್ನೊಂದು ಇರುವಂಥ ಲಿಂಗವಿನ್ಯಾಸವಲ್ಲಿದೆ. ಸಣ್ಣ ಲಿಂಗವು ಮೂರು ಮುಕ್ಕಾಲು ಅಂಗುಲ, ದೊಡ್ಡ ಲಿಂಗ ಏಳುವರೆ ಅಂಗುಲವಿದ್ದು ಬೆಟ್ಟದಪುರದ ಮಲ್ಲಿಕಾರ್ಜುನ ದೇಗುಲದಲ್ಲಿ ಕಂಡುಬರುತ್ತದೆ. ಇದು ಸಿದ್ಧರಾಮನ ಆರಾಧ್ಯದೈವದ, ಆರಾಧನೆಯು ಹರಡಿದ್ದ ವಿಸ್ತಾರ ತಿಳಿಸುವಂತಿದೆ ಎಂದು ಖ್ಯಾತ ಪುರಾತತ್ವವಿದ್ವಾಂಸ ಸಿ.ಟಿ.ಎಂ. ಕೊಟ್ರಯ್ಯನವರು ಹೇಳುತ್ತಾರೆ (C.T.M. Kotraiah, Archaeology of Hampi-Vijayanagara, New Delhi, 2008, Bharatiya Kalaprakashan, p.86, (Ed. Dr. K.M. Suresh) ಅದೇ ತುಮಕೂರು ತಾಲ್ಲೂಕು ಬಿಳುಗುಂಬದಲ್ಲಿಯ ಸಿದ್ಧರಾಮಾಚಲದ ಮಧ್ಯೆ ಇರುವ ತ್ರೈಲಿಂಗ ಪಾಣಿವಟ್ಟದಲ್ಲಿ ಸಮತಟ್ಟಿನಲ್ಲಿ ೩ ಲಿಂಗಗಳು(ಬಾಣ ಭಾಗ ಮಾತ್ರ ಇವೆ) ಇರುವಲ್ಲಿ 'ಯೋಗಲಿಂಗ'ದ ಇನ್ನೊಂದು ರೂಪವಾಗಿರಬಹುದೇ? ಎಂದೆನಿಸುತ್ತದೆ.

ಜೈನಬಸದಿಗಳನ್ನು ಉಳಿಸಿಕೊಳ್ಳಬೇಕಾದ ಸಂದರ್ಭದಲ್ಲಿ, ಯಕ್ಕೋಟಿ ಸಮಯದ ಶೈವಯತಿಗಳು ಸಹಕರಿಸಿದ ಸಲುವಾಗಿ, ರಕ್ಷಣೆಯ ಕಾರಣವಾಗಿ ಯಕ್ಕೋಟಿ ಜಿನಾಲಯಗಳಾಗಿರುತ್ತಿದ್ದುವು. ಈ ಬಗ್ಗೆ ರೂಢಿ ಸಂಪ್ರದಾಯ ಶರಣವಾದ ದಿಗಂಬರ ಪಂಥವಷ್ಟೇ ಅಲ್ಲ ಯಾಪನೀಯ ಪಂಥದಲ್ಲಿಯೂ ಇತ್ತು. ಕ್ರಿ.ಶ.೧೧೮೭ರ ತೇರದಾಳ ಶಾಸನದಲ್ಲಿ ಗೊಂಕ ಜಿನಾಲಯದ ಆಚಾರ್ಯ ಪ್ರಭಾಚಂದ್ರ ಪಂಡಿತರಿಗೆ ಜೋಗವಟ್ಟಿಯನಿಕ್ಕಿ, ತ್ರಿಶೂಲದ ಘಂಟೆಯನ್ನು ಪಚಿ'ಯನ್ನು ಇಟ್ಟ ಬಗ್ಗೆ ಹೇಳಿದೆ. ಕ್ರಿ.ಶ.೧೪೨೨ರ ಮೈಸೂರು ಜಿಲ್ಲೆ ಮಲೆಯೂರಿನ ಬಸದಿಯ ತಾಮ್ರಶಾಸನದಲ್ಲಿ '... ವೀರಣ್ಣ ವರ್ತನೆಗೆ ... ತ್ರಿಯಂಬಕ ಸನ್ನಿಧಿಯಲ್ಲಿ ಧಾರೆ ಎರೆದು ...





ಮುಕ್ಕೊಡೆಯ ಕಲ್ಲನು ನೆಟ್ಟು' ದಾನ ಕೊಟ್ಟ ಬಗ್ಗೆ ಹೇಳಿದೆ.. 'ವೀರಣ್ಣ ವರ್ತನೆ'ಯು ವೀರಗಾಸಿಗಳ ವಡಬುಗಳ ಉಗ್ಗಡಿಕೆಗೆ ಕೊಟ್ಟ ದಾನ. ಈ ಉದಾಹರಣೆಯ ಹಿನ್ನೆಲೆಯಲ್ಲಿ ಸೊನ್ನಲಿಗೆ ಕೋಟೆಯ ತ್ರೈಲಿಂಗ-ತ್ರಿಕೂಟ ದೇಗುಲದ, ಜೊತೆಗೆ ತ್ರಿಕೂಟ ಬಸದಿಯು ಕೋಟೆಯೊಳಗೆ ಇದ್ದಿದ್ದರೆ ಅದು ಯಕ್ಕೋಟಿ ಜಿನಾಲಯವಾಗಿ ಅನುಯಾಯಿಗಳಿಲ್ಲದೆಯೋ ಬಿಂಬಗಳ ವಲಸೆಗೊಂಡ ಕಾರಣವೋ ಅಳಿದುಹೋಗಿರಬೇಕು. ನಂತರ ಬೇರೆಯ ಶಿವಪವಿತ್ರ ನೆಲಯೊಂದು ನೆಲೆಗೊಂಡಿರಬೇಕು. ಕ್ರಿ.ಶ.೧೧೩೬ರಲ್ಲಿ ತ್ರಿಕೂಟ ಶಿವಾಲಯಕ್ಕೆ ಶಾಸನೋಕ್ತವಾಗಿ ದತ್ತಿ ಕೊಟ್ಟಿರಲು ಬಹುಶಃ ಆ ಮುನ್ನವೆ ಆ ದೇವಾಲಯವಿದ್ದಿದ್ದುದರ ಸೂಚನೆಯಾಗುತ್ತದೆ.

ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಯಡೂರಿನಲ್ಲಿದ್ದ ಜಿನಾಲಯದ ಮೂರ್ತಿಗಳನ್ನು ಸಮೀಪದ ಕಲಕಂದೂರಿಗೆ ಒಯ್ದು, ಅಲ್ಲಿ ಜೈನರು ನೆಲೆಸಿ, ಜಿನಾಲಯದಲ್ಲಿ ಆರಾಧನೆ ನಡೆಯುತ್ತಿದೆ. ಯಡೂರಿನಲ್ಲಿ ಉಳಿದ ಕೆಲವು ಜೈನರು ಗೌಡಸಂಸ್ಕೃತಿಯರಾಗಿ ಸಪ್ತಮಾತೃಕೆ ಸಂಕೇತವಾದ ಸಬತಾಯಿ ಪೂಜೆಯನ್ನು ಸುಗ್ಗಿಕಟ್ಟೆ ಹಬ್ಬದಲ್ಲಿ ಮಾಡುವಲ್ಲಿ ತಮ್ಮ ಹಿಂದಿನ ಪದ್ಧತಿಯಾದ ಬಾಯಿಗೆ ಬಟ್ಟೆ ಕಟ್ಟಿಕೊಂಡು, ನೈವೇದ್ಯವನ್ನು ಅರ್ಪಿಸುತ್ತಾರೆ. ಹೀಗೆಯೇ ಅನ್ಯದೇವತಾರಾಧನೆಗೆ ಮತಾಂತರಗೊಂಡ ಜೈನರು, ಆರಾಧಿಸುವ ದೇಗುಲ, ಗದ್ದುಗೆ ಬಳಿ 'ಜೈನರ ಬ್ರಹ್ಮ'ನ ಸಂಕೇತ ಶಿಲೆಯಾದ 'ಭರಮಪಪ್ಪ'ನನ್ನು ಇಂದಿಗೂ ಇಟ್ಟು ಪೂಜಿಸುವ ಪೂರ್ವಸ್ಮರಣಾ ಪದ್ಧತಿ ಇದೆ, ಎಂಬುದು ಈ ಸಂದರ್ಭದಲ್ಲಿ ಗಮನಾರ್ಹ. ಇವೆಲ್ಲ ಕಾಲಾಂತರದ ಬದಲಾವಣೆಗಳಾಗಿ ಸಹಜವೆನಿಸಿಬಿಟ್ಟಿದೆ. ಅದನ್ನು ಅವರ್‍ಯಾರು ಅನ್ಯಥಾ ಭಾವಿಸಿಲ್ಲದಿರುವುದೂ ಗಮನಾರ್ಹ.

ಇನ್ನೂ ಸಿದ್ಧರಾಮನ ಧಾರ್ಮಿಕ ಅನುಸರಣೆಯ ನೆಲೆಗಳನ್ನು ಶಾಸನದ ಸಂಕೇತಗಳಿಗೆ ಹೋಲಿಸಿ ನೋಡಿದರೆ, ಅವನ ವಚನಗಳಲ್ಲಿ ಸಾಕ್ಷೀಕರಿಸಿ ಕೊಳ್ಳಬೇಕು:

ಸಿದ್ಧರಾಮನ ವಚನ (೩೦೭)ದಲ್ಲಿ: 'ದ್ವಾತ್ರಿಂಶತ್ ಕುಸುಮ ಮಧ್ಯದಲ್ಲಿದ್ದ ನಾ ಸೂರ್ಯ। ... ಚಿದಾತ್ಮನ ಮಧ್ಯದಲ್ಲಿಪ್ಪನಾ ಚಿತ್ರಕಾಳೆ ಸ್ವರೂಪಮಲ್ಲ ಪರಶಿವನು । ಅಂತಪ್ಪ ಪರಶಿವನು ಎನ್ನ ಸುಜ್ಞಾನಕಾಯದ । ಮಸ್ತಕದ ಮೇಲೆ ಹಸ್ತವನಿರಿಸಿ । ... ಕೈಯಲ್ಲಿ ಲಿಂಗವ ಕೊಟ್ಟು ಶ್ರೀ ಗುರುವಿನ ಶ್ರೀ ಚರಣಕ್ಕೆ। ನಮೋ ನಮೋ ಎಂದು ಬದುಕಿದೆನಯ್ಯಾ । ಕಪಿಲಸಿದ್ಧ ಮಲ್ಲಿಕಾರ್ಜುನಾ'

ಸಿದ್ಧರಾಮನ ವಚನ (೧೩೪): 'ಗುರುವಾಗಿ ಬಂದೆನಗೆ ದೀಕ್ಷೆಯ ಮಾಡಿದಿರಿ । ಲಿಂಗವಾಗಿ ಬಂದೆನ್ನ ಮನದ ಮಲಿನವ ಕಳೆದಿರಿ । ಜಂಗಮವಾಗಿ ಬಂದೆನ್ನ ಪ್ರಪಂಚಕತನವ ಕಳೆದು । ಪರಮ ಸೀಮೆಯ ಮಾಡಿದಿರಿ ಇಂತಿವೆಲ್ಲವೂ ಬಸವಣ್ಣನಾಗಿ ಎನಗೆ । ಪ್ರಸಾದವ ನಿಡಿ ಸಲಹಿದ ಕಪಿಲಸಿದ್ಧ ಮಲ್ಲಿಕಾರ್ಜುನ...'

ವಚನ (೭೧೦): '...ನಿನ್ನನರ್ಚಿಸಿದ ಪುರಾತನರು ನೀವೆಯಾದರು । ನಿನ್ನನರ್ಚಿಸಿದ ಬಸವಣ್ಣ ನೀನೆಯಾದೆ । ಎಲೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ । ಗುರುವಾಗಿ ಬಂದೆನ್ನ ಭಾವದ ಬೇರ ಹರಿದ ಬಳಿಕ । ನಿನ್ನವರು ನೀನು ನಾನೆಂಬ ಸಂದೇಹವೇಕಯ್ಯ?'

ವಚನ (೧೨೪೩): 'ನಮ್ಮ ಕಪಿಲಸಿದ್ಧಮಲ್ಲನ ನೋಡುವಡೆ । ಲಿಂಗಪೂಜೆ ಜಂಗಮ ದಾಸೋಹವೇ ಬೇಕು'.

ವಚನ (೧೯೯೧)[೪೬]: 'ದೀಕ್ಷಾತ್ರಯದಲ್ಲಿ ಸಂಪನ್ನರಾಗಿ । ಪ್ರಸಾದದಲ್ಲಿ ಲೋಲುಪ್ತರಾಗಿ । ಜಂಗಮವೆ ಲಿಂಗವೆಂಬುವರ ಸಂಗದೊಳಿರಿಸೆನ್ನ । ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗ ನಿಮ್ಮ ಧರ್ಮ' (ಡಾ. ಎಸ್. ವಿದ್ಯಾಶಂಕರ್ ಸಂಪಾದಿತ ಸಂಪುಟ)

ಸಿದ್ಧರಾಮನ ವಚನ (೯೧): 'ನಿಷ್ಠಾ ಮಾಹೇಶ್ವರನೆನಿಕು ಅಮುಗಿದೇವಯ್ಯಗಳಿಂದ । ಪ್ರಭುದೇವರೆಂಬ ಅನಾದಿ ಜಂಗಮವ ಕಂಡೆನಯ್ಯಾ।'

ವಚನ (೧೦೩): 'ಗುರುವಿನ ಕರುಣದಿಂದ ಎನ್ನ ಕರಸ್ಥಲದಲ್ಲಿ ಸಿಕ್ಕಿ ಒಳಗಾದೆ । ಶಿವನ ಮಹಾಲಿಂಗ ಕಪಿಲಸಿದ್ಧ ಮಲ್ಲಿಕಾರ್ಜುನಾ'

ಸಂಕೀರ್ಣ ವಚನ ಸಂಪುಟದ (ಡಾ. ಬಿ.ಆರ್. ಹಿರೇಮಠ ಸಂಪಾದಿತ) ಸಕಲೇಶ ಮಾದರಸರ ವಚನ: 'ಅವರೆಂದಂತೆ ಅಹುದೆನ್ನಲು ಅಂಗದ ಮೇಲೆ ಲಿಂಗದ ಪ್ರತಿಷ್ಠೆಯಾಗದೇ ಶಿವಯೋಗ ಸಿದ್ಧರಾಮಯ್ಯಂಗೆ' (ವಚನ ೪೫೦).

– ಈ ವಚನಗಳು ಸಿದ್ಧರಾಮನ ಅನುಸರಿಸಿದ ಧಾರ್ಮಿಕ ಹಂತಗಳ ಅಂತಿಮ ಘಟ್ಟವನ್ನು ನಿರೂಪಿಸಿವೆ. ಡಿ.ಎಲ್. ನರಸಿಂಹಾಚಾರ್ಯರು ಇದನ್ನು ಸಮರ್ಥಿಸುವಂತೆ ತೀರ್ಮಾನ ತಳೆದಿದ್ದಾರೆ[೪೭]. ಇದಕ್ಕೆ ಪೋಷಕವಾಗಿ ಶಾಸನಗಳಿಂದ ಸೂಚನೆಗಳು ಒದಗುತ್ತವೆ. ಸಿದ್ಧರಾಮನಿಗೆ ಗುರುವಿನ ಮೂಲಕ ಲಿಂಗದೀಕ್ಷೆಯಾದ ಸಂಗತಿಯು ತಿಳಿಯುತ್ತದೆ. ಸಿದ್ಧರಾಮನ ವಚನವೆ ಶಾಸನಾರಂಭಕ್ಕೆ ಇದ್ದು, ಮನದ ಕೊನೆಯ ಜೋತೀಶ್ವರ, ಲಿಂಗಕ್ಕೆ ಹಸ್ತೋದಕ, ಕಪಿಲಸಿದ್ದ ಮಲ್ಲಿಕಾರ್ಜುನ ಇತ್ಯಾದಿ ಲಿಂಗದೀಕ್ಷೆಯ ಸೂಚನೆ ಶಬ್ದಗಳು ಮಂತ್ರಗೋಪ್ಯದ ಸೂಚಕ ಶಬ್ದಗಳಾಗಿ ಅಲ್ಲಿ ಕಾಣುಬರುತ್ತವೆ.

*(ಮುಂದುವರೆಯುತ್ತದೆ)*

**ಅಡಿಟಿಪ್ಪಣಿಗಳು :**

೪೩. ಡಾ. ಎಂ.ಎಂ. ಕಲಬುರ್ಗಿ, ಐತಿಹಾಸಿಕ, ೧೯೯೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೧೩೭, ೧೩೯, ೧೪೦.

೪೪. ಡಾ. ಎಂ.ಜಿ. ನಾಗರಾಜ್, ಶಿವಾರಾಧನೆ, ೨೦೧೨, ಶ್ರೀಮದ್ವೀರಶೈವ ಸಂಶೋಧನ ಸಂಸ್ಥೆ, ಬಾಳೆಹೊನ್ನೂರು, ಪು.೧೯.

೪೫. ಅದೇ., ಪು.೭೩.

೪೬. ಶ್ರೀ ಎಸ್. ಶಿವಣ್ಣನವರು ಗುರುತಿಸಿದ ಅಪ್ರಕಟಿತ ವಚನಗಳ ಪೈಕಿ ಇದೂ ಒಂದಾಗಿದೆ. ಚಿತ್ರದುರ್ಗದ ಬೃಹನ್ಮಠದ ಸಂಗ್ರಹದಲ್ಲಿ ಅಕ್ಷರಾಂಕ ಹೆಸರಿನ ತಾಡವೋಲೆ ಪ್ರತಿ ೩೧೦/೨ಯಲ್ಲಿ ಲಭ್ಯವಾದದ್ದು, (ನೋಡಿ ವಚನ ಸಂಪುಟದ ವಚನ, ೧೯೯೧ ಮತ್ತು ಅಡಿಟಿಪ್ಪಣಿ, ಪು.೫೬೮)

೪೭. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ (೪ನೆಯ ಸಂಪುಟ), ಮೈಸೂರು ವಿಶ್ವವಿದ್ಯಾಲಯ, ೧೯೭೭, ಪು.೫೩೧.



ವರದಿ

# ಶರಣರ ಕಾಯಕವೇ ಜೀವನ ಮೌಲ್ಯ

– ಡಾ. ಆರ್.ಬಿ. ಚಿಲುಮಿ *

ಪೃಥ್ವಿ, ಅಪ್ಪ್, ತೇಜ, ವಾಯು, ಆಕಾಶ ಎಂಬ ಪಂಚ ಮಹಾಭೂತಗಳಿಂದ ನಿರ್ಮಾಣವಾದ ಈ ಮಾನವನ ದೇಹವು ಪುನಃ ಪಂಚಭೂತಗಳಲ್ಲಿ ಲೀನವಾಗುವುದು ಖಚಿತ. ಅಂದರೆ ಹುಟ್ಟು ಆಕಸ್ಮಿಕವಾದರೆ ಸಾವು ಖಚಿತವೆಂದರ್ಥ. ಆದರೆ ಇವೆರಡು ಅವಸ್ಥೆಗಳ ಮಧ್ಯದಲ್ಲಿರುವ ಜೀವಿತದ ಅವಧಿಯು ಬಹುಮುಖ್ಯ. ಅಂತೆಯೇ ಬಸವಣ್ಣನವರೆಂದರು "ನೆರೆ ಕೆನ್ನೆಗೆ ತೆರೆ ಗಲ್ಲಕೆ – ಶರೀರ ಗೂಡುವೋಗದ ಮುನ್ನ, ಮುಪ್ಪಿಂದೊಪ್ಪು ಅಳಿಯದ ಮುನ್ನವೇ........ ಪೂಜಿಸು ನಮ್ಮ ಕೂಡಲಸಂಗಮದೇವನ" ಎಂದಿರುವುದನ್ನು ನಾವಿಂದು ಗಮನಿಸಬೇಕು ಎನ್ನುವಂತಿದೆ. ಅವರು ಬಳಸಿದ ಪದ 'ಪೂಜೆ' ಎನ್ನುವುದೇ ಕಾಯಕದ ಮುನ್ಸೂಚನೆ. ಕಾಯಕ ಮಾಡಿಯೇ ತಾನುಣ್ಣುವ ಪೂರ್ವದಲ್ಲಿ ಲಿಂಗದೇವನಿಗೆ ಅರ್ಪಿಸಬೇಕು, ಹಸಿದು ಬಂದವರಿಗೆ ದಾಸೋಹವನ್ನು ಮಾಡಬೇಕೆನ್ನುವ ಭಾವವಿದರಲ್ಲಡಗಿದೆ. ಆಹಾರ, ವಸ್ತ್ರ, ಆಶ್ರಯ, ಗಾಳಿ, ನೀರು – ಈ ಪಂಚ ದೈವ(ವಸ್ತು)ಗಳು ಪ್ರತಿಯೊಬ್ಬನಿಗೂ ಅತ್ಯಗತ್ಯ! ಗಾಳಿ-ನೀರನ್ನು ನಿಸರ್ಗ(ದೈವ)ದತ್ತ ಕೊಟ್ಟ ಕಾಯಕದಿಂದಲೇ ಪಡೆಯಬೇಕು. ಸ್ವತಃ ದುಡಿದು ಪಡೆಯಬೇಕು. ಕಾರೆಯ ಸೊಪ್ಪಾದರೂ ಸರಿ ದುಡಿದು ದೇವನಿಗರ್ಪಿಸಿ, ತಾನುಂಡು ಉಳಿದರೆ ದಾಸೋಹಗೈಯಬೇಗೆಂಬುದು ಬಸವಾದಿ ಶರಣರ ನಿಜದ ಸಿದ್ಧಾಂತ.

ಕಾಯಕದ ಪರಿಕಲ್ಪನೆ ಬಸವಾದಿ ಶರಣರ ಕಟ್ಟಳೆಗಳಲ್ಲಿ ಅತ್ಯಂತ ಮೌಲ್ಯಯುತವಾದುದು. ಧರ್ಮ ಮಾರ್ಗದಿಂದ ಗಳಿಸುವುದು, ಸತ್ಯ ಶುದ್ಧತೆಯಿಂದ ಸಂಪಾದಿಸುವುದು. ಅದನ್ನು ಕೇವಲ ತನ್ನ ಹೆಂಡತಿ-ಮಕ್ಕಳಿಗೋಸ್ಕರ ಮೀಸಲಿರಿಸದೇ, ಗುರು-ಲಿಂಗ-ಜಂಗಮರ ದಾಸೋಹಕ್ಕೆ ವ್ಯಯಿಸುವುದು ಕಾಯಕವೆನಿಸುವುದು. ಕಾಯಕದಿಂದ ವ್ಯಷ್ಟಿ-ಸಮಷ್ಟಿಗಳ ಹಿತವಿದ್ದು, ಸುಖೀ ಸಮಾಜದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಕಾಯಕದ ಮಹತ್ವತೆಯನ್ನು ಅನೇಕ ಶರಣರು ತಮ್ಮ ತಮ್ಮ ವಚನಗಳಲ್ಲಿ ಪ್ರತಿಪಾದಿಸಿರುವರು. ಮನುಷ್ಯ ಜೀವನದ ಒರೆಗಲ್ಲು ಕಾಯಕವಾಗಿದೆ. 'ನಾನು ಆರಂಭವ ಮಾಡುವೆನಯ್ಯಾ ಗುರು ಪೂಜೆಗೆಂದು' ಎಂದಿದ್ದಾರೆ ಬಸವಣ್ಣ. 'ಕೃತ್ಯ ಕಾಯಕ-ವಿಲ್ಲದವರು ಭಕ್ತರಲ್ಲ, ಸತ್ಯಶುದ್ಧವಿಲ್ಲದುದು ಕಾಯಕವಲ್ಲ' 'ಕಾಯಕ ನಿಂದಿತ್ತು ಹೋಗಯ್ಯಾ ಎನ್ನಾಳ್ದನೆ – ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು ನಿಶ್ಚೈಸಿ ಮಾಡಬೇಕೆಂಬುದಾಗಿ – ಆಯ್ದಕ್ಕಿ ಲಕ್ಕಮ್ಮನವರ ಮಾತನ್ನಿಲ್ಲಿ ಗಮನಿಸಬೇಕು. ಕಾಯಕ ತಪ್ಪಿದಡೆ ಸೈರಿಸಬಾರದು ಎಂದಿದ್ದಾರೆ ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯರು. ಬಸವಣ್ಣನವರು "ಕಾಯಕವೇ ಕೈಲಾಸ"ವೆಂದರೆ ಅವರ ಅನುಯಾಯಿಗಳಾದ ಶರಣ ಆಯ್ದಕ್ಕಿ ಮಾರಯ್ಯನವರು "ಕಾಯಕವೇ ಕೈಲಾಸ"ವೆಂದರು. ಮನಸಂದ ಮಾರಿತಂದೆ ಶರಣನೂ "ಕಾಯಕವೇ ಕೈಲಾಸ" ಎಂದಿದ್ದಾರೆ.

ಕಾಯಕದಲ್ಲಿ ನಿರತನಾದವನು ಗುರು-ಲಿಂಗ-ಜಂಗಮರು ಮುಂದಿದ್ದರೂ ಹಂಗು ಹರಿಯಬೇಕು! ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು ಎಂದಿರುವುದನ್ನು ನಾವಿಂದು ಗಮನಿಸಬೇಕು. ಅಂದಿನ ಎಲ್ಲ ಶರಣರೂ ಶ್ರಮಗೌರವದ ಆರಾಧಕರಾಗಿದ್ದರು. ಅಂದಿನ ವೈದಿಕ ನೀತಿಯ ದುರ್ಭರ ಸಂದರ್ಭದಲ್ಲಿ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಕಿಲುಬು ಬಿಡಿಸಿ, ಹೊಚ್ಚ ಹೊಸ ವಾತಾವರಣವನ್ನು ಮೂಡಿಸಿದವರು ಬಸವಾದಿ ಶರಣರು. ಅವರು ರೂಪಿಸಿದ ಸಮಾಜಕ್ಕೆ ಶ್ರಮದ ದುಡಿಮೆಯೇ ಆಧಾರವಾಗಿತ್ತು. ಆ ದುಡಿಮೆಯ ಆಧಾರವಾಗಿತ್ತು. ಆ ದುಡಿಮೆಯನ್ನೇ ಶರಣರು "ಕಾಯಕ" ಎಂದು ಕರೆದು ಅದಕ್ಕೆ ಒಂದು ಪವಿತ್ರವಾದ ಸ್ಥಾನ ತಂದುಕೊಟ್ಟರು.

**"ನಿರ್ಮಲ ಕರ್ಮವನು ಸದ್ಗತಿಗೆ ಸಾಧನ ನೋಡಾ !**
**ನಿರ್ಮಲ ಕರ್ಮವದು ಜ್ಞಾನಕ್ಕೆ ಸಾಧನ ನೋಡಾ !**
**ನಿರ್ಮಲ ಕರ್ಮವದು ಕಪಿಲಸಿದ್ಧ ಮಲ್ಲಿಕಾರ್ಜುನನ**
**ಕೂಡುವ ಕೂಟ ನೋಡಾ !**

ಎಂದು ಹೇಳಿ ಕಾಯಕಕ್ಕೆ ಒಂದು ದಿವ್ಯತ್ವ ಒದಗಿಸಿದರು. ಸಿಪಾಯಿಯಿಂದ ಪ್ರಧಾನಿಯ (ಕಾಯಕದ)ವರೆಗೂ ಪರಮಪವಿತ್ರ, ಶ್ರೇಷ್ಠ ಕಾಯಕವೆಂದು ಹೇಳಿದರು. ಇದರಿಂದಾಗಿ ಮಾನಸಿಕ ಕೆಲಸದ ದೊಡ್ಡಸ್ತಿಕೆ ಮತ್ತು ದೈಹಿಕ ಕೆಲಸದ ನಿಕೃಷ್ಟತೆಗಳು

* ಸಾಹಿತಿಗಳು, ಧಾರವಾಡ-03

ನಿವಾರಣೆಯಾಗಿ ಜಾತಿ, ವರ್ಗ, ವರ್ಣ, ಲಿಂಗ ಭೇದಗಳು ಇಲ್ಲವಾದವು. ಕಾಯಕ ಸೂತ್ರದ ಪಾಲನೆಯೊಂದಿಗೆ ಸಮಾಜ ವ್ಯವಸ್ಥೆಯಲ್ಲಿ ಮೌನಕ್ರಾಂತಿಯುಂಟಾಯಿತು. ಶರಣರು ಸಾರಿದ ಕಾಯಕ ಸಿದ್ಧಾಂತದಿಂದಾಗಿ ವ್ಯಕ್ತಿಯ ಬದುಕು, ವೈಯಕ್ತಿಕ ಅಸ್ತಿತ್ವಕ್ಕೆ ಬದಲಾಗಿ ಸಮಾಜದ ಸೇವೆಗೆ ಮೀಸಲಾಯಿತು. ಇದರಿಂದ ಸಮಾಜವೂ ಜಾಗೃತವಾಗುವಂತಾಯಿತು. ಶರಣರ ಕಾಯಕ ಸಿದ್ಧಾಂತ ಅರ್ಥಹೀನ ದೈಹಿಕ ದುಡಿಮೆಯಲ್ಲ; ಅನ್ಯರ ಸುಖಕ್ಕಾಗಿ ಬೆವರು ಹರಿಸುವ ನೀತಿ-ಹೀನ ಜೀತವಲ್ಲ ಅಥವಾ ಭೌತಿಕ ಸುಖವಷ್ಟೇ ಅದರ ಪರಮ ಉದ್ದೇಶವಾಗಿರಲಿಲ್ಲ. ಪ್ರತಿಯೊಬ್ಬರೂ ದುಡಿದೇ ಉಣ್ಣಬೇಕು. ದುಡಿಯುವುದು ಜೀವನದ ಆಧಾರಕ್ಕಾದರೂ, ದುಡಿಮೆಯ ಫಲ ಸಮಾಜಕ್ಕೆ ಹಂಚಿಕೆಯಾಗಬೇಕು. ನಾಳೆಗೆಂದು ಕೂಡಿಡದೆ ಅಂದಂದಿಗೆ ಗಳಿಕೆ ಅಂದಂದೇ ಬಳಕೆಯಾಗಬೇಕು. ಹಾಗೆಯೇ ಮಾಡಿದೆನೆಂಬುದು ಮನದಲ್ಲೂ ಹೊಳೆಯಬಾರದು. ಅಂದಾಗ ಮಾತ್ರ ಕಾಯಕದ ಬದುಕಿನ ಸಾರ್ಥಕತೆ. ಇದುವೇ ಕಾಯಕದ ಮೌಲ್ಯ !

ಶರಣರ ಧರ್ಮದ 'ಕಾಯಕ ತತ್ತ್ವ' ಹೊಸ ಸಮಾಜ ನಿರ್ಮಾಣಕ್ಕೆ ತಳಹದಿಯಾಯಿತು. ಏಕೆಂದರೆ ಶರಣರು ಸನಾತನ ಎನ್ನುವ ಧರ್ಮದ ಹೆಸರಿನಲ್ಲಿ ಜಾತಿಯ ತಳಹದಿಯ ಮೇಲೆ ಸಮಾಜ ರಚಿಸಲಿಲ್ಲ. ಸಮಾಜ ರಚನೆಗೆ ದುಡಿಮೆಯ ಧರ್ಮವನ್ನು ಆಧಾರವಾಗಿಟ್ಟುಕೊಂಡರು. ಶರಣರು ಆಚರಿಸಿದ ಕಾಯಕ ಮೌಲ್ಯದಲ್ಲಿ ಆಸೆಯ ಸುಳಿವಿಲ್ಲ. ಅವರ ಕಾಯಕ ಮತ್ತು ಅದರ ಫಲವೆಲ್ಲ ಸಮಾಜ (ಜಂಗಮ)ಕ್ಕೆ ಮೀಸಲು. ಶರಣರ ಕಾಯಕದ ಪರಿಕಲ್ಪನೆ ವಿಶ್ವವನ್ನೇ ನಿಬ್ಬೆರಗಾಗಿಸೀತು. ಕಾಯಕವೆಂಬುದು ಕರ್ಮ, ಕ್ರಿಯೆಯ ಆಚರಣೆಯ ಭಾಗವಾಯಿತು. ಅವರದು ಔದ್ಯೋಗಿಕ, ಆರ್ಥಿಕ, ಸಾಮಾಜಿಕ, ನೈತಿಕಾದಿ ನೆಲೆಗಟ್ಟಿನ ಮೇಲೆ ನಿಂತಿದ್ದು; ಸಾಮಾಜಿಕ ನೆಮ್ಮದಿ ಹಾಗೂ ಸಮಾನತೆ ಶ್ರಮಗೌರವ ಮತ್ತು ಪ್ರೀತಿ, ಶುದ್ಧ ಆರ್ಥಿಕ ವ್ಯವಸ್ಥೆ, ವ್ಯಕ್ತಿ ಹಾಗೂ ಸಮಾಜದ ಶೀಲವರ್ಧನೆ, ಪಾರಮಾರ್ಥಿಕ ಸಾಧನೆ-ಸಿದ್ಧಿಗಳ ನೆಲೆಯವರೆಗೂ ಈ ಪರಿಕಲ್ಪನೆಯನ್ನು ವಿಕಾಸಗೊಳಿಸಿದರು, ಸಮಗ್ರಗೊಳಿಸಿದರು. ಅಲ್ಲದೇ ಕಾಯಕವನ್ನು ಆತ್ಮೋದ್ಧಾರ ಸಾಧನೆಯ ಮಟ್ಟಕ್ಕೇರಿಸಿದರು. ಕಾಯಕವೇ ಆಧ್ಯಾತ್ಮಿಕ ಸಾಧನೆಯ ಕೊನೆಯ ನಿಲುಗಡೆ. ಅವರ ದರ್ಶನದಂತೆ ಶೂನ್ಯದಿಂದ ಸೃಷ್ಟಿಯಾಗುವುದಲ್ಲ; ಆಗಸದಿಂದ ಇಳಿದು ಬರುವಂತಹುದಲ್ಲ; ನಿಂತ ನೆಲದಲ್ಲಿಯೇ; ಬದುಕುವ ಬಾಳಿನಲ್ಲೇ, ತೊಟ್ಟ ಕಾಯಕದಲ್ಲೇ ಬೆಳೆಯುವ ಬೆಳಸು. ಪ್ರಭುದೇವರ ವಚನದಲ್ಲಿದನ್ನು ಸ್ಫುಟವಾಗಿ ಕಾಣಬಹುದು.

"ತನುವ ತೋಂಟವ ಮಾಡಿ,
ಮನವ ಗುದ್ದಲಿಯ ಮಾಡಿ,
ಅಗೆದು ಕಳೆದೆನಯ್ಯಾ ಭ್ರಾಂತಿನ ಬೇರ,
ಒಡೆದು ಸಂಸಾರದ ಹೆಂಟೆಯ,
ಬಗಿದು ಬಿತ್ತಿದೆನಯ್ಯಾ ಬ್ರಹ್ಮ ಬೀಜವ.

ಅಖಂಡಲಮಂಡಲವೆಂಬ ಬಾವಿ, ಪವನವೆ ರಾಟಾಳ
ಸುಷುಮ್ನನಾಳದಿಂದ ಉದಕವ ತಿದ್ದಿ,
ಬಸವಗಳೈವರು ಹಸಗೆದಿಸಿಹವೆಂದು
ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ
.............. ಆವಾಗಳೂ ಈ ತೋಟದಲ್ಲಿ ಜಾಗರವಿದ್ದು
ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ !"

ಎಂಬುದರಲ್ಲಿ ಸಂಸಾರದ ಹೆಂಟೆಯನ್ನು ಬಗಿದೇ ಬ್ರಹ್ಮ ಬೀಜವನ್ನು ಬಿತ್ತಿ ಬೆಳೆಸುವ ಕ್ರಿಯೆ ಅತ್ಯಂತ ಮಾರ್ಮಿಕವಾದ ಪ್ರತಿಮಾ ವಿಧಾನದಿಂದ ಪ್ರಭುದೇವರು ಈ ವಚನದಲ್ಲಿ ವ್ಯಕ್ತಪಡಿಸಿದ್ದಾರೆ. ಇದು ಬರಿಯ ಅಲಂಕಾರವಲ್ಲ, ಕೃಷಿ ಕಾಯಕದಲ್ಲಿ ಆತ್ಮ ಕೃಷಿ ಕಾಯಕವನ್ನು ಕಂಡ ದರ್ಶನ ಧ್ವನಿ. ಇಂತಹ ಉಭಯ ಶುದ್ಧ ದೃಷ್ಟಿಯ ದರ್ಶನದ ಪರಿಮಿಡಿಯಲ್ಲಿಯೇ ಕಾಯಕಕ್ಕೆ ಶರಣರಲ್ಲಿ ಒತ್ತು ಬಿದ್ದುದು, ಮನುಷ್ಯನ ಬದುಕಿಗೆ ಅನ್ನ, ವಸ್ತ್ರ, ಮನೆಮಾರು ಅಗತ್ಯವಾದವುಗಳು. ಇವನ್ನು ತನಗಾಗಿ, ತನ್ನವರಿಗಾಗಿ, ಸಮಾಜಕ್ಕಾಗಿಯಾಗಲಿ ಹುಟ್ಟಿಸಲು, ಪಡೆಯಲು ಒಂದಿಲ್ಲೊಂದು ರೀತಿಯಲ್ಲಿ ಶ್ರಮಿಸಬೇಕಾಗುತ್ತದೆ. ಧರ್ಮ ಮಾರ್ಗದಿಂದ ಗಳಿಸಿದ ಸಂಪತ್ತಿನಿಂದ ಪ್ರತಿದಿನವೂ ಗುರು-ಲಿಂಗ-ಜಂಗಮರಿಗೆ ದಾಸೋಹ ಮಾಡುವುದೇ ಸದಾಚಾರ ಕಾಯಕದ ಮಹಿಮೆ !

ಹೀಗೆ ಕಾಯಕದ ಪರಿಕಲ್ಪನೆ ಕಾರಣರಿಂದ ಮೂಡಿ ಬಂದು ಪ್ರಾಯೋಗಿಕ ಮಹತ್ವವನ್ನು ಪಡೆದುಕೊಂಡಿದೆ. ಬಸವಾದಿ ಶರಣರೆಲ್ಲರೂ ಒಂದೊಂದು ಕಾಯಕವನ್ನಾಶ್ರಯಿಸಿ, ತಮ್ಮ ಸಂಪಾದನೆಯನ್ನು ಕಲ್ಯಾಣದ ಮಹಾಮನೆಯಲ್ಲಿ ಜರುಗುತ್ತಿದ್ದ ದಾಸೋಹದಲ್ಲಿ ವಿನಿಯೋಗಿಸುತ್ತಿದ್ದರು. ಪ್ರತಿಯೊಬ್ಬನೂ ಪ್ರಾಮಾಣಿಕತೆಯಿಂದ ದುಡಿದು ಸಂಪತ್ತನ್ನು ಗಳಿಸುವುದರಿಂದ ಸಮಾಜದಲ್ಲಿ ಒಂದು ಪಿಡುಗಾಗಿರುವ ಭ್ರಷ್ಟಾಚಾರ, ಲಂಚಗುಳಿತನಗಳು ತಾವಾಗಿಯೇ ನಿರ್ನಾಮವಾಗುತ್ತವೆಯಲ್ಲದೇ, ಪ್ರತಿಯೊಬ್ಬರೂ ಕಾಯಕ ಮಾಡುವುದರಿಂದ ಸೋಮಾರಿತನ, ಬಡತನಗಳು ನಾಶವಾಗಿ ಪರಿಶುದ್ಧವೂ, ಸತ್ಯಯುತವೂ ಆದ ಸಮಾಜ ನಿರ್ಮಾಣವಾಗುತ್ತದೆ. ಇದರಿಂದ ಬಡವ-ಬಲ್ಲಿದ ಎಂಬ ತಾರತಮ್ಯ ಭಾವನೆಯೂ ನಿವಾರಣೆಯಾಗಿ ಸರ್ವ ಸಮಾನತೆಯ ಸುಖೀ ಸಮಾಜ ನಿರ್ಮಾಣವಾಗಲೂ ಸಾಧ್ಯವಾಗುತ್ತದೆ.



ವರದಿ

## ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಸರ್ವಸದಸ್ಯರ ೬೫ನೇ ಮಹಾಧಿವೇಶನ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭ

ಪದ್ಮಭೂಷಣ, ಕರ್ನಾಟಕ ರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದಿಂದ ೧೯೫೪ ರಲ್ಲಿ ಪ್ರಾರಂಭವಾದ ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಪರಮಪೂಜ್ಯರ ಮಾರ್ಗದರ್ಶನದ ಮುಂಬೆಳಕಿನಲ್ಲಿ ಸಾಧನಾ ಪಥದಲ್ಲಿ ಸೇವಾಗಾಮಿಯಾಗಿ ಮುನ್ನಡೆಯುತ್ತಿದ್ದು ೧೫,೫೫೦ ಸದಸ್ಯರನ್ನೊಳಗೊಂಡಿದ್ದು ರಾಜ್ಯದಲ್ಲಿಯೇ ಹೆಚ್ಚು ಸದಸ್ಯರನ್ನೊಳಗೊಂಡ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ಸಂಘದ ಪ್ರಧಾನ ಕಾರ್ಯದರ್ಶಿಗಳೂ ಆದ ಡಾ. ಎಂ.ಎನ್. ಚನ್ನಬಸಪ್ಪನವರ ಮಾರ್ಗದರ್ಶನದಲ್ಲಿ ಕ್ರಿಯಾಶೀಲತೆ, ಬದ್ಧತೆ, ಕಳಕಳಿಯನ್ನು ಮೈಗೂಡಿಸಿಕೊಂಡಿರುವ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸಂಘದ ಮೂಲಕ ಹಲವಾರು ರಚನಾತ್ಮಕ, ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಸದಸ್ಯರ ಮುಕ್ತಮನಸ್ಸಿನ ಸಹಾಯ, ಸಹಕಾರದಿಂದ ಹಂತ ಹಂತವಾಗಿ ಯಶಸ್ವಿಯಾಗಿ ಮುನ್ನಡೆಸಿಕೊಂಡು ಬರುತ್ತಿದ್ದು ಎಲ್ಲರ ಪ್ರೀತಿ, ಅಭಿಮಾನಕ್ಕೆ ಪಾತ್ರವಾಗಿದೆ ಎಂದು ತಿಳಿಸಲು ಸಂತೋಷವಾಗುತ್ತಿದೆ.

ಸಂಘದ ಹಲವು ಮುಖಗಳ ಸೇವೆಯಲ್ಲಿ ತೊಡಗಿದ್ದು, ಸಿದ್ಧಗಂಗಾ ಮಾಸಪತ್ರಿಕೆ ಪ್ರಕಟಣೆ, ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ಹಾಗೂ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ನ ಮೂಲಕ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಯನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಾ ಬಂದಿದೆ. ಇವುಗಳ ಜೊತೆಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪಟ್ಟಾಧಿಕಾರದ ಸುವರ್ಣ ಮಹೋತ್ಸವ, ವಜ್ರಮಹೋತ್ಸವ, ಅಮೃತ ಮಹೋತ್ಸವ ಹಾಗೂ ಶತಮಾನೋತ್ಸವ ಸಮಾರಂಭಗಳ ಯಶಸ್ವಿಯಾಗಿ, ಅಭೂತಪೂರ್ವವಾಗಿ ನಡೆಯಲು ಸಂಘದ ಪಾತ್ರ ಮಹತ್ತರವಾದುದು ಎಂದು ಹೇಳಲು ಅಭಿಮಾನವೆನಿಸುತ್ತದೆ.











ಡಾ. ಎಂ.ಎನ್. ಚನ್ನಬಸಪ್ಪ ಅವರಿಂದ ಸ್ವಾಗತ



ಕೆ.ಎಚ್. ಶಿವರುದ್ರಯ್ಯ ಅವರಿಂದ ಸಂಘದ ವಾರ್ಷಿಕ ವರದಿ ಮಂಡನೆ



ಶ್ರೀ ಕೆ.ಬಿ. ಶಿವಶಂಕರಯ್ಯ ಅವರಿಂದ ಸಿದ್ಧಗಂಗಾ ಮಾಸಪತ್ರಿಕೆ ವಾರ್ಷಿಕ ವರದಿ ಮಂಡನೆ

ಡಿಸೆಂಬರ್ ೨೨ ರಂದು ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಆಯೋಜಿಸಲಾಗಿದ್ದ ಸಂಘದ ಸರ್ವಸದಸ್ಯರ ೬೫ನೇ ಮಹಾಧಿವೇಶನ ಹಾಗೂ 'ಸಿದ್ಧಗಂಗಾಶ್ರೀ', 'ಸಿದ್ಧಗಂಗಾ ಶಿವಕುಮಾರಶ್ರೀ', 'ಕಾಯಕಯೋಗಿ' ಹಾಗೂ 'ಸಂಘಸಿರಿ' ಪ್ರಶಸ್ತಿ ಪ್ರದಾನ ಸಮಾರಂಭ ಅಭೂತಪೂರ್ವವಾಗಿ ನಡೆಯಿತು.

ಸಮಾರಂಭ ಶ್ರೀ ಎನ್. ಜ್ಞಾನಮೂರ್ತಿ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪನವರು ಎಲ್ಲರನ್ನು ಸ್ವಾಗತಿಸಿ, ಸಿದ್ಧಗಂಗಾ ಮಠದ ನೆರಳಿನಲ್ಲಿ ನಾವೆಲ್ಲಾ ಬೆಳೆದು ಬಂದಿದ್ದೇವೆ. ನಮ್ಮನ್ನೆಲ್ಲ ಕೈಹಿಡಿದು ಕಾಪಾಡಿದ್ದಾರೆ, ನಡೆಸಿದ್ದಾರೆ ಎಂದು ಭಕ್ತಿಯಿಂದ, ಕೃತಜ್ಞತೆಯಿಂದ ಸ್ಮರಿಸಿಕೊಂಡರು.

ಕಾರ್ಯಕ್ರಮವನ್ನು ಹರಗುರು ಚರಮೂರ್ತಿಗಳು ಹಾಗೂ ಪ್ರಶಸ್ತಿ ಪುರಸ್ಕೃತರ ಉಪಸ್ಥಿತಿಯಲ್ಲಿ ಜ್ಯೋತಿ ಬೆಳಗಿಸಿ ಉದ್ಘಾಟಿಸಿದ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಚನ ದಯಪಾಲಿಸುತ್ತಾ ಪರಮಪೂಜ್ಯರನ್ನು ನೆನೆದು ಕ್ಷಣಕಾಲ ಭಾವುಕರಾದರು.

"ಪರಮಪೂಜ್ಯರ ಆಶೀರ್ವಾದದಿಂದ ಪ್ರಾರಂಭವಾದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಶ್ರೀಮಠದ ಅಭಿವೃದ್ಧಿ ಕಾರ್ಯದಲ್ಲಿ ಉತ್ತಮ ಸೇವೆಯನ್ನು ಮಾಡುತ್ತಾ ಬರುತ್ತಿರುವುದಕ್ಕಾಗಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪ ಹಾಗೂ ಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರ ಪ್ರಾಮಾಣಿಕ ಸೇವೆಯನ್ನು ಪ್ರಶಂಸಿದರು. ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘ ಯಾವಾಗಲೂ ಮಠದ ಸೇವೆಗಾಗಿ ಇರುವಂತಹದು. ಪರಮಪೂಜ್ಯರು ಕೊಟ್ಟು ಹೋದ ಶಕ್ತಿ ಹಳೆಯ ವಿದ್ಯಾರ್ಥಿ ಸಂಘ ಎಂದು ಹೇಳಿದರು.

ಪರಮಪೂಜ್ಯರು ಎರಡು ಸಂದರ್ಭಗಳಲ್ಲಿ ಸಂತೋಷಪಡುತ್ತಿದ್ದರು. ಪ್ರಸಕ್ತ ಮಠದಲ್ಲಿರುವ ವಿದ್ಯಾರ್ಥಿಗಳು ಹಾಗೂ ವರ್ಷಕ್ಕೊಮ್ಮೆ ಸಮಾವೇಶಗೊಳ್ಳುವ ಹಳೆಯ ವಿದ್ಯಾರ್ಥಿಗಳನ್ನು ನೋಡಿದಾಗ ಸಂತೋಷಪಡುತ್ತಿದ್ದರು. ನಿಮ್ಮೆಲ್ಲರ ಸಹಕಾರದಿಂದ ಮಠ ಎತ್ತರಕ್ಕೆ ಬೆಳೆಯಲು ಸಾಧ್ಯವಾಗಿದೆ. ನೀವೆಲ್ಲ ಪೂಜ್ಯರ ಸಂದೇಶವನ್ನು ತಲೆಯ ಮೇಲೆ ಹೊತ್ತು ಸೇವೆ ಮಾಡುತ್ತಿದ್ದೀರಿ. ಪರಮಪೂಜ್ಯ ಶ್ರೀಗಳವರು ತಮ್ಮ ಇಡೀ ಜೀವನವನ್ನು ಸೇವೆಗಾಗಿ ಮುಡಿಪಾಗಿಟ್ಟಿದ್ದರಿಂದ










ಪ್ರೊ. ಟಿ.ಆರ್. ಮಹಾದೇವಯ್ಯ ಅವರಿಗೆ 'ಸಿದ್ಧಗಂಗಾಶ್ರೀ' ಮರಣೋತ್ತರ ಪ್ರಶಸ್ತಿ. ಪ್ರಶಸ್ತಿಯನ್ನು ಅವರ ಧರ್ಮಪತ್ನಿ ಶ್ರೀಮತಿ ಬಿ. ರಾಜಮ್ಮ ಅವರು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಸ್ವೀಕರಿಸುತ್ತಿರುವುದು.

ಪ್ರಖ್ಯಾತರಾಗಿದ್ದರು. ವೈಯುಕ್ತಿವಾದ ತಪಸ್ಸು, ಸಾಧನೆ, ಸಮಾಜಸೇವೆಯಿಂದ ಅವರು ವಿಶ್ವಜ್ಯೋತಿಯಾದರು, ವಿಶ್ವರತ್ನವಾದರು.

ನಮ್ಮ ಜನ್ಮಕ್ಕೆ ತಂದೆ ತಾಯಿಗಳು ಕಾರಣವಾದರೆ, ಸ್ವಾಭಿಮಾನದಿಂದ ತಲೆ ಎತ್ತಿ ನಿಲ್ಲುವಂತಾದುದು ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಂದ. ಈ ಹಿಂದೆ ನೀವೆಲ್ಲ ಓದುತ್ತಿದ್ದ ಸಂದರ್ಭದಲ್ಲಿ ಮಠದ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಅನ್ನದಲ್ಲಿ ಕಲ್ಲಿತ್ತು, ಸಾರಿನಲ್ಲಿ ನೀರಿತ್ತು. ಅಂತಹ ಸಂದರ್ಭದಲ್ಲಿ ಬೆಳೆದು ಬಂದ ವಿದ್ಯಾರ್ಥಿಗಳು ನೀವು ಎಂದು ಹೇಳಿದರು.

ಪರಮಪೂಜ್ಯ ಶ್ರೀಗಳವರು ಮಠವನ್ನು ಮುನ್ನಡೆಸಲು ದಿನಕ್ಕೆ ೨೦ ಗಂಟೆಗಳ ಕಾಲ ಶ್ರಮಪಡುತ್ತಿದ್ದರು. ಅವರು ತಿಳಿಸಿಕೊಟ್ಟ ಕಾಯಕದ ಮಹತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದರಿಂದ ಚಲಾವಣೆ ನಾಣ್ಯವಾಗಿ ಎಲ್ಲಿಯೂ ಸಲ್ಲುವಂತೆ ಇದ್ದೀರಿ, ಶ್ರೀಮಠದ ರಾಯಭಾರಿಗಳಾಗಿದ್ದೀರಿ ಎಂದು ತಿಳಿಸಿದರು. ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಭಾವುಕರಾಗಿ ನಮ್ಮ ಮುಂದೆ ಪೂಜ್ಯ ಗುರುಗಳು ಇಲ್ಲದೆ ಹೋದರೂ ಅವರು ಎಲ್ಲರ ಮನಸ್ಸಿನಲ್ಲಿಯೂ ಇದ್ದಾರೆ" ಎಂದು ತಿಳಿಸಿದರು.

## ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ



ಶ್ರೀ ಎಸ್. ಮಲ್ಲಣ್ಣ ದಂಪತಿಗಳು

ಶ್ರೀಮತಿ ಎಂ. ಮಧುರ ಆಶೋಕ್‌ಕುಮಾರ್

ಡಾ. ಹೆಚ್. ಹನುಮಂತರಾಯ



ಪ್ರೊ. ಹೆಚ್.ವಿ. ವೀರಭದ್ರಯ್ಯ ದಂಪತಿಗಳಿಗೆ 'ಕಾಯಕಯೋಗಿ' ಪ್ರಶಸ್ತಿ

## ಸಂಘಶ್ರೀ ಪ್ರಶಸ್ತಿ ಪ್ರದಾನ



ಪೂಜ್ಯ ಶ್ರೀ ಶ್ರೀ ಶಿವಲಿಂಗ ಸ್ವಾಮಿಗಳು



ಶ್ರೀ ಬಿ.ಎನ್. ಚಿನ್ನಪ್ಪ



ಶ್ರೀ ಹೆಚ್. ಗಂಗಪ್ಪ ದಂಪತಿಗಳು



ಶ್ರೀ ಕೆ. ಬಸವಯ್ಯ ದಂಪತಿಗಳು



ಡಾ. ಲಕ್ಷ್ಮಣದಾಸ ದಂಪತಿಗಳು



ಶ್ರೀ ಶಿವಕುಮಾರ್ ಪಾಟೀಲ್ ತೇಗಂಪೂರ್



'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪ್ರಾಯೋಜಕರು
ಶ್ರೀಮತಿ ಶಕುಂತಲ ಜಯದೇವ್ ಅವರು





'ಕಾಯಕಯೋಗಿ' ಪ್ರಶಸ್ತಿ ಪ್ರಾಯೋಜಕರು
ಶ್ರೀ ಶಿವಕುಮಾರ್ ಅವರು



ರಾಜ್ಯ ಶಿಕ್ಷಕ ಪ್ರಶಸ್ತಿ ಪುರಸ್ಕೃತರು:
ಶ್ರೀ ಬಿ.ಆರ್. ರಾಜಶೇಖರ್‌ರವರು

ಮರಣೋತ್ತರವಾಗಿ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಪಡೆದ ಪ್ರೊ. ಟಿ.ಆರ್. ಮಹಾದೇವಯ್ಯನವರು ಎಲೆಮರೆಯ ಹೂವಿನಂತಿದ್ದರು. ಪಂಡಿತ ಚನ್ನಪ್ಪ ಎರೇಸೀಮೆ ಅವರೊಂದಿಗೆ ಮಾಡಿದ ಸೇವೆಯನ್ನು ಮಾಡಿದುದನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು. ಪ್ರಶಸ್ತಿಗಳ ಹಿಂದೆ ನಾವು ಹೋಗಬಾರದು, ಪ್ರಶಸ್ತಿಗಳೇ ನಮ್ಮನ್ನು ಹುಡುಕಿಕೊಂಡು ಬರಬೇಕು ಆಗ ಪ್ರಶಸ್ತಿಯ ಮೌಲ್ಯ ಹೆಚ್ಚುತ್ತದೆ. ಇವತ್ತು ನೀಡಿದ ಪ್ರಶಸ್ತಿಗಳೆಲ್ಲವೂ ಹುಡುಕಿಕೊಂಡು ಬಂದಂತವುಗಳು, ಪೂಜ್ಯರ ಸ್ಮರಣೆ ನಮಗೆ ಮಾರ್ಗದರ್ಶನವಾಗಿರುವಂತಹದು" ಎಂದು ಹೇಳಿದರು.

ಪ್ರಾರಂಭದಲ್ಲಿ ಸಂಘದ ಸಂಕ್ಷಿಪ್ತ ಪರಿಚಯವನ್ನು ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಮಾಡಿಕೊಟ್ಟರು.

'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಹಿರಿಯ ವಿದ್ವಾಂಸರಾದ ಪ್ರೊ. ಟಿ.ಆರ್. ಮಹಾದೇವಯ್ಯ ಅವರಿಗೆ ಮರಣೋತ್ತರವಾಗಿ ನೀಡಲಾಯಿತು. ಪ್ರಶಸ್ತಿಯನ್ನು ಅವರ ಧರ್ಮಪತ್ನಿ ಶ್ರೀಮತಿ ಬಿ. ರಾಜಮ್ಮನವರು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಸ್ವೀಕರಿಸಿದರು. ಪ್ರಶಸ್ತಿಯು ಒಂದು ಲಕ್ಷ ರೂ. ನಗದು, ಸ್ಮರಣಿಕೆ, ಪ್ರಶಸ್ತಿಪತ್ರವನ್ನೊಳಗೊಂಡಿದೆ. 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಯನ್ನು ಮೈಸೂರಿನ ಶ್ರೀ ಎಸ್. ಮಲ್ಲಣ್ಣನವರು, ಬೆಂಗಳೂರಿನ ಶ್ರೀಮತಿ ಎಂ. ಮಧುರ ಅಶೋಕ್‌ಕುಮಾರ್‌ರವರು ಹಾಗೂ ಡಾ. ಹೆಚ್. ಹನುಮಂತರಾಯರವರು, 'ಕಾಯಕಯೋಗಿ' ಪ್ರಶಸ್ತಿಯನ್ನು ಸಿದ್ಧಗಂಗಾ ಮಾಸಪತ್ರಿಕೆಯ ಪ್ರಧಾನ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ ಅವರು ಸ್ವೀಕರಿಸಿದರು. ಪ್ರಶಸ್ತಿಯು ೧೦ ಸಾವಿರ ರೂ. ನಗದು, ಸ್ಮರಣಿಕೆ ಹಾಗೂ ಪ್ರಶಸ್ತಿಪತ್ರಗಳನ್ನೊಳಗೊಂಡಿದೆ. 'ಸಂಘಸಿರಿ' ಪ್ರಶಸ್ತಿಯನ್ನು ಶ್ರೀ ಮೇದಿನಿಮಠದ ಪೂಜ್ಯ ಶ್ರೀ ಶಿವಲಿಂಗ ಸ್ವಾಮಿಗಳವರ ಪರವಾಗಿ ಇಮ್ಮಡಿ ಶ್ರೀ ಶಿವಲಿಂಗ ಸ್ವಾಮಿಗಳವರು, ಬೆಂಗಳೂರಿನ ಶ್ರೀ ಬಿ.ಎನ್. ಚನ್ನಪ್ಪ, ಶ್ರೀ ಹೆಚ್. ಗಂಗಪ್ಪ, ಶ್ರೀ ಕೆ. ಬಸವಯ್ಯ, ಮಲ್ಲಸಂದ್ರದ ಡಾ. ಲಕ್ಷ್ಮಣದಾಸ್ ಹಾಗೂ ಬೀದರ್‌ನ ಶ್ರೀ ಶಿವಕುಮಾರ ಪಾಟೀಲ್ ತೇಗಂಪೂರ ಅವರು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ವರಿಂದ ಸ್ವೀಕರಿಸಿದರು. ಪ್ರಶಸ್ತಿಯು ಸ್ಮರಣಿಕೆ ಹಾಗೂ ಪ್ರಶಸ್ತಿ ಪತ್ರವನ್ನೊಳಗೊಂಡಿದೆ. ಈ ಸಲ ಪ್ರಶಸ್ತಿ ಪುರಸ್ಕೃತರ ಕುಟುಂಬದವರನ್ನು ಕೂರಿಸಿ ಸನ್ಮಾನ ಮಾಡಿದ್ದು ವಿಶೇಷವಾಗಿತ್ತು.

ಇದೇ ಸಂದರ್ಭದಲ್ಲಿ ಪ್ರಸಕ್ತ ಸಾಲಿನಲ್ಲಿ ಪ್ರೌಢಶಾಲಾ ವಿಭಾಗದಲ್ಲಿ ರಾಜ್ಯಪ್ರಶಸ್ತಿಗೆ ಭಾಜನರಾದ ಬೆಂಗಳೂರಿನಲ್ಲಿರುವ ಶಿವನಹಳ್ಳಿ ಸಿದ್ಧಗಂಗಾ ಪ್ರೌಢಶಾಲಾ ಮುಖ್ಯ ಶಿಕ್ಷಕರಾದ ಶ್ರೀ ಬಿ.ಆರ್. ರಾಜಶೇಖರ್, ಹಾಗೂ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರವನ್ನು ಪರಮಪೂಜ್ಯ ಶ್ರೀಗಳು ಸನ್ಮಾನಿಸಿ ಆಶೀರ್ವದಿಸಿದರು.

ಪ್ರಶಸ್ತಿ ಪುರಸ್ಕೃತರ ಪರವಾಗಿ ಶ್ರೀ ಎಸ್. ಮಲ್ಲಣ್ಣ, ಡಾ. ಲಕ್ಷ್ಮಣದಾಸ್, ಡಾ. ಹೆಚ್. ಹನುಮಂತರಾಯ, ಹೆಚ್.ವಿ. ವೀರಭದ್ರಯ್ಯ, ಶ್ರೀಮತಿ ಎಂ. ಮಧುರ ಅಶೋಕ್‌ಕುಮಾರ್, ಶ್ರೀ ತಗಡೂರು ವೀರಭದ್ರಸ್ವಾಮಿ ರವರು ಮಾತನಾಡಿ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಲು ಆಶೀರ್ವಾದ, ಮಾರ್ಗದರ್ಶನ ಮಾಡಿದ, ತಾಯಿ


ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಚನ

ಪ್ರೀತಿಯನ್ನು ತೋರಿಸಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕೃತಜ್ಞತೆಯಿಂದ ಸ್ಮರಿಸಿಕೊಂಡರು. ಪೂಜ್ಯರು ಸದಾ ನಮ್ಮ ಹೃದಯದಲ್ಲಿ ನೆಲಸಿದ್ದಾರೆ ಎಂದು ಹೇಳಿದರು.

ಪ್ರಶಸ್ತಿ ಪುರಸ್ಕೃತರ ಪರವಾಗಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಗುರುವಂದನೆ ಸಲ್ಲಿಸಲಾಯಿತು. ಇದೇ ಸಂದರ್ಭದಲ್ಲಿ ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ ಪ್ರಾಯೋಜಕರಾದ ಶ್ರೀಮತಿ ಶಕುಂತಲ ಜಯದೇವ, ಕಾಯಕಯೋಗಿ ಪ್ರಶಸ್ತಿ ಪ್ರಾಯೋಜಕರಾದ ಶ್ರೀ ಎಂ. ಶಿವಕುಮಾರ್ ಅವರನ್ನು, ಸಿದ್ಧಗಂಗಾ ಮಾಸಪತ್ರಿಕೆಗೆ ಹೆಚ್ಚು ಚಂದಾದಾರರನ್ನಾಗಿ ಮಾಡಿದ ಶ್ರೀ ತೀರ್ಥಪ್ಪನವರನ್ನು ಗೌರವಿಸಲಾಯಿತು.

ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ವಾರ್ಷಿಕ ವರದಿಯನ್ನು ಪ್ರೊ. ಬಿ. ಗಂಗಾಧರಯ್ಯ, ಹಳೆಯ ವಿದ್ಯಾರ್ಥಿ ಸಂಘದ ವಾರ್ಷಿಕ ವರದಿಯನ್ನು ಶ್ರೀ ಕೆ.ಹೆಚ್. ಶಿವರುದ್ರಯ್ಯ, ಸಿದ್ಧಗಂಗಾ ಮಾಸಪತ್ರಿಕೆಯ ವಾರ್ಷಿಕ ವರದಿಯನ್ನು ಶ್ರೀ ಕೆ.ಬಿ. ಶಿವಶಂಕರ ಅವರು ಮಂಡಿಸಿ ಸಭೆಯ ಅನುಮೋದನೆ ಪಡೆದರು. ಶ್ರೀ ಕೊ.ರಂ. ಬಸವರಾಜು ಅವರು ಶರಣು ಸಮರ್ಪಣೆ ■


ಸಮಾವೇಶದಲ್ಲಿ ಪಾಲ್ಗೊಂಡಿದ್ದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು



## ದಾನಿಗಳ ಪಟ್ಟಿ

### ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೯೫೦. | ಶ್ರೀ ಶಿವಶಂಕರ ಬೆಂಗಳೂರು | ೨,೦೦೦ |
| ೨೯೫೧. | ಶ್ರೀ ಕೆ. ದಾಮೋದರ್ ಬೆಂಗಳೂರು | ೫,೦೦೧ |
| ೨೯೫೨. | ಶ್ರೀ ಸಿದ್ಧಣ್ಣ ಶಿವಲಿಂಗಪ್ಪ ಪಾಟೀಲ್ ನಾಗಪುರ, ಮಹಾರಾಷ್ಟ್ರ | ೨೧,೦೦೦ |
| ೨೯೫೩. | ಶ್ರೀ ಎ.ಎಸ್. ನಾಗರಾಜಪ್ಪ ದಾವಣಗೆರೆ | ೨,೦೦೦ |
| ೨೯೫೪. | ಶ್ರೀ ಆರ್. ಹುಚ್ಚಾಚಾರಿ ಬೆಂಗಳೂರು | ೨೫,೦೦೦ |
| ೨೯೫೫. | ಶ್ರೀ ಬಿ.ಪಿ. ಬಸವರಾಜು ತುಮಕೂರು. | ೧,೦೦೧ |
| ೨೯೫೬. | ಶ್ರೀ ಎಸ್.ಎಂ. ಮಲ್ಲೇಶಪ್ಪ ಹಾಸನ | ೨,೦೦೦ |
| ೨೯೫೭. | ಶ್ರೀ ಕೆಂಪಹನುಮಯ್ಯ ತುಮಕೂರು. | ೨,೦೨೦ |
| ೨೯೫೮. | ಶ್ರೀ ರುದ್ರೇಶ ಹಾಸನ | ೧೦,೦೦೦ |
| ೨೯೫೯. | ಶ್ರೀ ಜಿ. ರೇವಣ್ಣ ಕಳ್ಳಿಪಾಳ್ಯ | ೧,೦೦೧ |
| ೨೯೬೦. | ಶ್ರೀ ಎಂ. ಭವೀಶ್ ಮಾದೇನಹಳ್ಳಿ | ೮೬೬ |
| ೨೯೬೧. | ಶ್ರೀ ಸಿ.ಎಂ. ರಂಗಣ್ಣ ಬೆಂಗಳೂರು. | ೨,೦೦೦ |
| ೨೯೬೨. | ಶ್ರೀ ಎಸ್. ಷಣ್ಮುಖಪ್ಪ ತುಮಕೂರು. | ೨,೦೦೦ |
| ೨೯೬೩. | ಶ್ರೀ ಡಿ.ಎನ್. ಶಿವಶಂಕರಯ್ಯ ತುಮಕೂರು. | ೧೦,೦೦೦ |
| ೨೯೬೪. | ಶ್ರೀ ಅಮೀನ್ ರೆಡ್ಡಿ ಮಡ್ನಿಕೊಡ | ೧,೦೦೦ |
| ೨೯೬೫. | ಶ್ರೀ ಮಲ್ಲನಗೌಡ ಎಸ್. ಬೆನಕನಹಳ್ಳಿ | ೨,೦೦೧ |
| ೨೯೬೬. | ಶ್ರೀ ಜಿ.ಎನ್. ರೇಣುಕಾರಾಧ್ಯ ಹೇರೋಹಳ್ಳಿ. | ೨,೦೦೦ |
| ೨೯೬೭. | ಶ್ರೀ ಮಲ್ಲಿಕಾರ್ಜುನ ಒಡೆಯರ್ ಬೆಟ್ಟಹಲಸೂರು. | ೨,೦೦೦ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೯೬೮. | ಶ್ರೀ ರಾಮಣ್ಣ ತುಮಕೂರು. | ೧,೫೦೦ |
| ೨೯೬೯. | ಶ್ರೀ ಹೆಚ್.ಆರ್. ಅಶೋಕ್ ಹೊಸಪೇಟೆ. | ೧,೦೦೧ |
| ೨೯೭೦. | ಶ್ರೀ ಬಿ.ವಿ. ಚಂದ್ರಶೇಖರಯ್ಯ ತುಮಕೂರು. | ೧,೦೦೦ |
| ೨೯೭೧. | ಶ್ರೀ ವಿಹಾರ್ ಬೆಂಗಳೂರು. | ೧,೦೦೦ |
| ೨೯೭೨. | ಶ್ರೀ ಎನ್. ನಾಗರಾಜು ಬೆಂಗಳೂರು. | ೧,೦೦೦ |
| ೨೯೭೩. | ಶ್ರೀ ಜಿ.ಪಿ. ರಾಜಣ್ಣ ಬೆಂಗಳೂರು. | ೧,೦೦೧ |
| ೨೯೭೪. | ಶ್ರೀ ಚಂದ್ರಯ್ಯ ಮಲ್ಲಸಂದ್ರ. | ೧,೦೦೧ |
| ೨೯೭೫. | ಶ್ರೀ ಗಂಗನರಸಯ್ಯ ಬೆಂಗಳೂರು. | ೧,೦೦೨ |
| ೨೯೭೬. | ಶ್ರೀ ಎ.ಸಿ. ಚಂದ್ರಪ್ಪ ಶ್ರೀನಗರ. | ೧,೦೦೧ |
| ೨೯೭೭. | ಶ್ರೀ ಉಗ್ರೇಗೌಡ ಬೆಂಗಳೂರು. | ೧,೧೧೧ |
| ೨೯೭೮. | ಶ್ರೀ ಸುಬೇದಾರ್ ಬಿ. ಲಿಂಗಣ್ಣ ಬೆಂಗಳೂರು. | ೨,೦೦೧ |
| ೨೯೭೯. | ಶ್ರೀ ವೀರಭದ್ರೇಗೌಡ ರಾಯಚೂರು. | ೨,೦೦೦ |
| ೨೯೮೦. | ಶ್ರೀ ಎಂ.ಎ. ರಾಜಣ್ಣ ಮೈಸೂರು. | ೧,೦೦೦ |
| ೨೯೮೧. | ಶ್ರೀ ಟಿ.ಎನ್. ತಿಮಪ್ಪ ಬೆಂಗಳೂರು. | ೧,೦೦೦ |
| ೨೯೮೨. | ಶ್ರೀ ಆರ್. ಮಹದೇವಯ್ಯ ಬೆಂಗಳೂರು. | ೨,೦೦೦ |
| ೨೯೮೩. | ಶ್ರೀ ಎಂ. ಮಲ್ಲಿಕಾರ್ಜುನಯ್ಯ ಬೆಂಗಳೂರು. | ೧,೦೦೦ |
| ೨೯೮೪. | ಶ್ರೀ ಪಿ. ಸಿದ್ಧಗಂಗಪ್ಪ ನೆಲಮಂಗಲ. | ೧,೦೦೧ |

(ಮುಂದುವರೆಯುತ್ತದೆ)



# ನೆರೆ ಸಂತ್ರಸ್ತರ ನೆಮ್ಮದಿಗೆ ಸರ್ಕಾರದ ನಿರಂತರ ಶ್ರಮ



ಕರ್ನಾಟಕ ರಾಜ್ಯದಲ್ಲಿ ಆಗಸ್ಟ್-ಅಕ್ಟೋಬರ್ ನಡುವೆ ಬಿದ್ದ ದಾಖಲೆ ಮಳೆ ಮತ್ತು ಭಾರೀ ಪ್ರವಾಹದಿಂದಾಗಿ ಜನ, ಜಾನುವಾರು ಮತ್ತು ಆಸ್ತಿ-ಪಾಸ್ತಿಗೆ ಭಾರಿ ನಷ್ಟವಾಗಿದ್ದು, ಸುಮಾರು ರೂ.35,160 ಕೋಟಿ ಮೌಲ್ಯದ ನಷ್ಟ ಅಂದಾಜು ಮಾಡಲಾಗಿದೆ. ರಾಜ್ಯ ಸರ್ಕಾರ ಕೇಂದ್ರದ ನೆರವಿನೊಂದಿಗೆ ಸಂತ್ರಸ್ತರ ರಕ್ಷಣೆ ಮತ್ತು ಪರಿಹಾರ ಕಾರ್ಯಗಳನ್ನು ಸಮರೋಪಾದಿಯಲ್ಲಿ ಕೈಗೊಂಡಿದೆ.

ಬಿ.ಎಸ್. ಯಡಿಯೂರಪ್ಪ
ಮುಖ್ಯಮಂತ್ರಿ

## ಸರ್ಕಾರ ಕೈಗೊಂಡ ಪರಿಹಾರ ಕ್ರಮಗಳು

- 22 ಜಿಲ್ಲೆಗಳ 103 ತಾಲ್ಲೂಕುಗಳು ಪ್ರವಾಹಪೀಡಿತವೆಂದು ಘೋಷಣೆ
- ಕೇಂದ್ರದಿಂದ 1,200 ಕೋಟಿ ರೂ. ಮಧ್ಯಂತರ ಪರಿಹಾರ ಬಿಡುಗಡೆ
- ರಾಜ್ಯ ಸರ್ಕಾರದಿಂದ ಪರಿಹಾರ ಕಾರ್ಯಗಳಿಗೆ 6,450 ಕೋಟಿ ರೂ. ಮಂಜೂರು
- ಇಲಾಖೆಗಳಿಗೆ ಪರಿಹಾರ ಕಾರ್ಯಗಳಿಗೆ ಇಲಾಖಾವಾರು 5,200 ಕೋಟಿ ರೂ. ಬಿಡುಗಡೆ
- ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ 1,184 ಕೋಟಿ ರೂ. ಪ್ರಸ್ತುತ ಲಭ್ಯ
- ಒಟ್ಟು 4.30 ಲಕ್ಷ ರೈತ ಕುಟುಂಬಗಳು ಬೆಳೆ ಹಾನಿ ಅನುಭವಿಸಿವೆ. ಖುಷ್ಕಿ ಭೂಮಿಗೆ ಹೆಕ್ಟೇರ್‌ಗೆ ರೂ.16,800/-, ನೀರಾವರಿ ಬೆಳೆಗಳಿಗೆ ರೂ.23,500/- ಮತ್ತು ವಾಣಿಜ್ಯ ಬೆಳೆಗಳಿಗೆ ರೂ.28,000/- ಪರಿಹಾರ ಘೋಷಣೆ
- ತಕ್ಷಣದ ಪರಿಹಾರವಾಗಿ ತಲಾ 10,000 ರೂ.ಗಳಂತೆ 2.04 ಲಕ್ಷ ಕುಟುಂಬಗಳಿಗೆ 204.10 ಕೋಟಿ ರೂ. ವಿತರಣೆ
- ಸೆಪ್ಟೆಂಬರ್ ಹಾಗೂ ಅಕ್ಟೋಬರ್ ಮಾಹೆಯಲ್ಲಿ ಉಂಟಾದ ಪ್ರವಾಹದಲ್ಲಿ ತೊಂದರೆಗೊಳಗಾದ ಕುಟುಂಬಗಳಿಗೂ ತಲಾ 10,000 ರೂ. ತಕ್ಷಣದ ಪರಿಹಾರ ಪಾವತಿಸಲು ಆದೇಶ ನೀಡಲಾಗಿದೆ
- 104 ಜನರ ಜೀವಹಾನಿಯಾಗಿದ್ದು ತಲಾ 5 ಲಕ್ಷ ರೂ. ಮತ್ತು ಅಸುನೀಗಿದ ಜಾನುವಾರುಗಳಿಗೆ 16 ರಿಂದ 30 ಸಾವಿರ ರೂ. ಪರಿಹಾರ ನೀಡಿಕೆ
- 5,180 ಕುಟುಂಬಗಳಿಗೆ ತಿಂಗಳಿಗೆ ತಲಾ 5,000 ರೂ.ಗಳಂತೆ ಮನೆ ಬಾಡಿಗೆ ಪಾವತಿಸಲು 2.59 ಕೋಟಿ ರೂ. ಬಿಡುಗಡೆ
- 1,761 ಕುಟುಂಬಗಳಿಗೆ ಶೆಡ್ ನಿರ್ಮಿಸಲು 8.38 ಕೋಟಿ ರೂ. ಬಿಡುಗಡೆ
- ಜಿಲ್ಲಾಧಿಕಾರಿಗಳು 635 ಶೆಡ್ ನಿರ್ಮಿಸುತ್ತಿದ್ದು ಅದಕ್ಕೆ 3.18 ಕೋಟಿ ರೂ. ಬಿಡುಗಡೆ
- ಲೋಕೋಪಯೋಗಿ ಇಲಾಖೆ ವತಿಯಿಂದ 1,738 ಕಾಮಗಾರಿಗಳನ್ನು ಕೈಗೊಳ್ಳಲು 750 ಕೋಟಿ ರೂ. ಬಿಡುಗಡೆ
- ಸಂಪರ್ಕ ಕಳೆದುಕೊಂಡಿದ್ದ 178 ರಸ್ತೆ/ಸೇತುವೆ ಪೈಕಿ 142 ರಸ್ತೆ/ಸೇತುವೆ ಸಂಪರ್ಕಗಳ ಪುನರ್ ಸ್ಥಾಪನೆ
- ಹಾನಿಗೊಳಗಾದ ಮನೆಗಳ ಪೈಕಿ ಶೇ.25ರವರೆಗೆ ಹಾನಿಯಾಗಿದ್ದರೆ 50,000/- ರೂ. ಪರಿಹಾರ ಮತ್ತು ಶೇ.25ಕ್ಕಿಂತ ಹೆಚ್ಚು ಹಾನಿಗೊಳಗಾದ ಮನೆಗಳಿಗೆ 5.00 ಲಕ್ಷ ರೂ.ನಂತೆ ಪರಿಹಾರ ಘೋಷಣೆ
- ಮನೆ ಕಾಮಗಾರಿಗಳಿಗೆ 1,000 ಕೋಟಿ ರೂ. ಬಿಡುಗಡೆ – ಪೂರ್ಣ ಹಾನಿಗೊಳಗಾದ 9,366 ಮನೆಗಳ ಪೈಕಿ 7,481 ಮನೆಗಳಿಗೆ 72.89 ಕೋಟಿ ರೂ. ಪಾವತಿ
- ಭಾಗಶಃ ಹಾನಿಗೊಳಗಾದ 22,567 ಮನೆಗಳಿಗೆ 115.67 ಕೋಟಿ ರೂ. ಬಿಡುಗಡೆ
- ಅಲ್ಪಸ್ವಲ್ಪ ಹಾನಿಗೊಳಗಾದ 67,046 ಮನೆಗಳ ಪೈಕಿ 64,737 ಮನೆಗಳಿಗೆ 161.84 ಕೋಟಿ ರೂ. ಬಿಡುಗಡೆ
- ಒಟ್ಟಾರೆ 97,920 ಮನೆಗಳ ಪೈಕಿ 92,267 ಮನೆಗಳಿಗೆ 350 ಕೋಟಿ ರೂ. ಬಿಡುಗಡೆ ಮಾಡಿದ್ದು 5,653 ಮನೆಗಳಿಗೆ ಹಣ ಪಾವತಿಸುವುದು ಬಾಕಿ ಇದೆ
- ಗ್ರಾಮೀಣಾಭಿವೃದ್ಧಿ/ಪಂಚಾಯತ್ ರಾಜ್ ಇಲಾಖಾ ವತಿಯಿಂದ ಕಾಮಗಾರಿ ಕೈಗೊಳ್ಳಲು 1,500 ಕೋಟಿ ರೂ. ಬಿಡುಗಡೆ
- ಸಣ್ಣ ನೀರಾವರಿ ಇಲಾಖೆ ವತಿಯಿಂದ ಕಾಮಗಾರಿ ಕೈಗೊಳ್ಳಲು 300 ಕೋಟಿ ರೂ. ಬಿಡುಗಡೆ
- ಎಸ್‌ಡಿಆರ್‌ಎಫ್ ಯೋಜನೆಯಡಿ 417.93 ಕೋಟಿ ರೂ. ಬಿಡುಗಡೆ
- 8,085 ಶಾಲೆಗಳ ಪೂರ್ಣ ಹಾನಿಗೊಳಗಾದ 2,791 ಕೊಠಡಿಗಳ ದುರಸ್ತಿಗೆ 200 ಕೋಟಿ ರೂ. ಬಿಡುಗಡೆ
- ತಕ್ಷಣವೇ ಶಾಲೆಗಳನ್ನು ಪ್ರಾರಂಭಿಸಲು 108 ಶೆಡ್‌ಗಳ ನಿರ್ಮಾಣ ಪೂರ್ಣಗೊಳಿಸಲಾಗಿದೆ, 204 ಶೆಡ್‌ಗಳು ನಿರ್ಮಾಣ ಹಂತದಲ್ಲಿವೆ
- ಪ್ರವಾಹದಿಂದ 2,879 ವಿದ್ಯುತ್ ಲೈನ್‌ಗಳು ಹಾನಿಗೊಳಗಾಗಿದ್ದು 2,877 ಲೈನ್‌ಗಳ ದುರಸ್ತಿ ಪೂರ್ಣ
- ಕುಡಿಯುವ ನೀರಿನ 300 ಯೋಜನೆಗಳು ಹಾನಿಗೊಳಗಾಗಿದ್ದು ಎಲ್ಲಾ 300 ಯೋಜನೆಗಳ ದುರಸ್ತಿ ಪೂರ್ಣ
- 2.07 ಲಕ್ಷ ನೀರಾವರಿ ಪಂಪ್‌ಸೆಟ್‌ಗಳಿಗೆ ಹಾನಿಯಾಗಿದ್ದು 1.89 ಲಕ್ಷ ಪಂಪ್‌ಸೆಟ್‌ಗಳ ದುರಸ್ತಿ ಪೂರ್ಣ (18,131 ಪಂಪ್‌ಸೆಟ್‌ಗಳ ದುರಸ್ತಿಗೆ ಕ್ರಮ)
- ಬೆಳೆ ನಷ್ಟ ಅನುಭವಿಸಿದ್ದ 1,38,726 ಫಲಾನುಭವಿಗಳಿಗೆ 282.53 ಕೋಟಿ ರೂ. ನೇರವಾಗಿ ಬ್ಯಾಂಕ್ ಖಾತೆಗಳಿಗೆ ಜಮಾ
- ಭಾಗಶಃ ಹಾನಿಗೊಳಗಾದ 2,958 ಅಂಗನವಾಡಿ ಕೇಂದ್ರಗಳ ತುರ್ತು ದುರಸ್ತಿಗೆ 54.61 ಕೋಟಿ ರೂ. ವೆಚ್ಚ ಮಾಡಲು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾದ ಹಣ ಬಳಸಿಕೊಳ್ಳುವಂತೆ ಸೂಚನೆ
- ಪ್ರವಾಹದಿಂದ 634 ಅಂಗನವಾಡಿ ಕೇಂದ್ರಗಳು ಸಂಪೂರ್ಣ ಹಾನಿಯಾಗಿದ್ದು ನಬಾರ್ಡ್ ಮೂಲಕ 87 ಕೋಟಿ ರೂ. ವೆಚ್ಚದಲ್ಲಿ ಪುನರ್ ನಿರ್ಮಾಣಕ್ಕೆ ಕ್ರಮ ಕೈಗೊಳ್ಳಲಾಗುತ್ತಿದೆ



ಸಂತ್ರಸ್ತರ ಸೇವೆಯಲ್ಲಿ ನಿಮ್ಮ ಸರ್ಕಾರ

ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

---

ಸ್ಥಾಪನೆ : 1995

ಶುಭಾಶಯಗಳೊಂದಿಗೆ
ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

ದೂರವಾಣಿ : 2277267
ಫ್ಯಾಕ್ಸ್ : 2277267

# ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ.ಹೆಚ್.ರಸ್ತೆ, ತುಮಕೂರು-572 102

## ಪ್ರಗತಿ ನೋಟ (31.03.2019 ರಲ್ಲಿದ್ದಂತೆ) ಮತ್ತು ಠೇವಣಿಗಳು (ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ | 4264 | ಸಾಲಗಳು | 10427.84 |
| ಪಾವತಿಯಾದ ಷೇರು ಬಂಡವಾಳ | 489.47 | ಹೂಡಿಕೆಗಳು | 4647.76 |
| ಆಪದ್ಧನ ಮತ್ತು ನಿಧಿಗಳು | 1736.60 | ದುಡಿಯುವ ಬಂಡವಾಳ | 15891.89 |
| ಠೇವಣಿಗಳು | 13665.82 | ನಿವ್ವಳ ಲಾಭ (ತೆರಿಗೆ ನಂತರ) | 253.70 |

## ಠೇವಣಿ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 46 ದಿವಸಗಳಿಂದ 90 ದಿವಸಗಳವರೆಗೆ | - ಶೇ. 5% | 1 ವರ್ಷ ಮೇಲ್ಪಟ್ಟು 2 ವರ್ಷದವರೆಗೆ | - ಶೇ. 7.5% |
| 91 ದಿವಸಗಳಿಂದ 180 ದಿವಸಗಳವರೆಗೆ | - ಶೇ. 6% | 2 ವರ್ಷ ಮೇಲ್ಪಟ್ಟು 3 ವರ್ಷದವರೆಗೆ | - ಶೇ. 8% |
| 181 ದಿವಸಗಳಿಂದ 365 ದಿವಸಗಳವರೆಗೆ | - ಶೇ. 7% | 3 ವರ್ಷ ಮೇಲ್ಪಟ್ಟು | - ಶೇ. 8% |

ಉಳಿತಾಯ ಖಾತೆ – ಶೇ. 4%

ಹಿರಿಯ ನಾಗರಿಕರಿಗೆ,
ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ ½% ಅಧಿಕ ಬಡ್ಡಿ ದರವನ್ನು ಅವರ ಠೇವಣಿಗಳ ಮೇಲೆ ನೀಡಲಾಗುವುದು.
ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ.)
ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ ಅಡಮಾನ ಸಾಲ, ಹೊಸ/ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ, ವಸ್ತು ಬಳಕೆದಾರರ ಸಾಲ, ಮೀರಳತೆ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 15

## ನೂತನ ಶಾಖೆಗಳು :

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ
ಬಿ.ಹೆಚ್. ರಸ್ತೆ, ತುಮಕೂರು
ಫೋನ್ : 0816-2277273

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಹಾಸ್ಪಿಟಲ್ ರಸ್ತೆ, ದಾಬಸಪೇಟೆ (ಸೋಂಪುರ)
ನೆಲಮಂಗಲ ತಾ||, ಬೆಂಗಳೂರು ಗ್ರಾಮಾಂತರ ಜಿಲ್ಲೆ
ಫೋನ್ : 080-7735409

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಕೆ.ಎಸ್.ಆರ್.ಟಿ.ಸಿ. ಬಸ್ ಸ್ಟಾಂಡ್ ರಸ್ತೆ,
ಒಕ್ಕಲಿಗರ ಸಮುದಾಯ ಭವನದ ಎದುರು
ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
ಫೋನ್ : 080-27622090

**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ವಿಜಯನಗರ ಶಾಖೆ. 27/1, 3ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ,
ವಿಜಯನಗರ, ಬೆಂಗಳೂರು- 560 040
ಫೋನ್ : 080-23301270

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಮಹೇಶಪ್ಪ
ಶ್ರೀ ಎಸ್. ವಿಶ್ವನಾಥಯ್ಯ
ಶ್ರೀ ಚಿಕ್ಕಯ್ಯ. ಆರ್.
ಶ್ರೀಮತಿ ಮಂಜುಳಾ ಪ್ರಸಾದ್
ಶ್ರೀ ಡಾ. ಎಸ್. ಪರಮೇಶ್
ಶ್ರೀ ಡಾ. ಆರ್.ಸಿ. ಪುಟ್ಟಬುದ್ಧಿ
ಶ್ರೀ ರಮೇಶ್ .ಸಿ.ಆರ್
ಶ್ರೀ ರಾಮಯ್ಯ
ಶ್ರೀ ಬಿ.ಎಸ್. ರುದ್ರೇಶಯ್ಯ
ಶ್ರೀ ಟಿ.ಎಮ್. ಸ್ವಾಮಿ
ಶ್ರೀಮತಿ ರೇಣುಕಾ ಲತಾ. ಎಸ್.

ಹೆಚ್.ಕೆ.ಶಿವಪ್ರಕಾಶ್
ಮುಖ್ಯಕಾರ್ಯನಿರ್ವಹಣಾಧಿಕಾರಿ

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bangalore-10, Ph : 23404222